# ಕೊಡಗು  ಸಂಗಾತಿ

ಪ್ಟಂಬರ್ 16 ರಿಂದ 30, 1999 ಪಾಕ್ಷಿಕ ಪತ್ರಿಕೆ (ಸೋಣ 29 – ನಿರ್ಲಾಲ್ 13ರತನಕ)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

.R. N. N. 240 ಸಂಪುಟ : 3 ಸಂಚಿಕೆ : 18 ಪುಟಗಳು : 24 ಬೆಲೆ ರೂ. : 5-00







ಸ್ವದೇಶಿ







ವಿದೇಶಿ

ಯಾರ ಕೊರಳಿಗೆ ಈ ವಿಜಯ ಮಾಲೆ? ಕಾದು ನೋಡೋಣಾ ಅಲ್ಲವೇ!

**ಪ್ರಜ್ಞಾವಂತ ಮತದಾರರ ತೀರ್ಮಾನದ ಮೇಲೆಯೇ ಭಾರತದ ಭವಿಷ್ಯ ಅವಲಂಬಿಸಿದೆ**

## ಕೈಲ್‌ಪೋಳ್ದ್ ಹಬ್ಬ

1999ನೇ ಸೆಪ್ಟಂಬರ್ ದಿನಾಂಕ 5ನೇ ಐತ್ಯವಾರ ಕೊಡಗಿನ ನಮ್ಮ ಬಾಂಧವು ಎಲ್ಲ ಸೇರಿಕಂಡ್ ಚೆನ್ನೈನಲ್ಲಿ ಕೈಲ್‌ಪೋಳ್ದ್ ಹಬ್ಬನ ಆಚರಿಸಿದೋ. ಸಮಾಜದ ಅಧ್ಯಕ್ಷರಾದ ಕರ್ಣಯ್ಯನ ವಸಂತನವರ ನಿವಾಸದಲ್ಲಿ ಆಚರಿಸಿದ್ ತುಂಬಾ ಲಾಯ್ಕಾತ್. ಮತ್ತೆ ಕರ್ಣಯ್ಯನ ವಸಂತ, ಶ್ಯಾಮಲ, ಕುಯಿಂತೋಡು ದಿನೇಶ್ ಹಂಸಿ, ಕರ್ಣಯ್ಯನ ಧನು ಸಬಿತ, ಗುಡ್ಡೇರ ಸತೀಶ್ ವಿಜಿ, ಉಳುವಾರನ ಸುರೇಶ್ ಬೀನಾ, ಊರುಬೈಲು ರಾಮಕೃಷ್ಣ, ಬಿಟ್ರ ಪ್ರಭಾಕರ್ ಮತ್ತೆ ಹತ್ತಾರು ಜನ ಗೌಡ ಬಾಂಧವು ಸೇರಿದ್ದೊ. ಹಿಂಗೆ ಪ್ರತಿ ವರ್ಷ ತಿಂಗಳಿಗೊಮ್ಮೆ ಸೇರಿಕೆ ಆಗದೆ ಹೋದ್ರು ಕೈಲ್‌ಪೋಳ್ದ್ ಮತ್ತೆ ಹುತ್ರಿತ ಹೇಳಿಕಂಡ್ ಸೇರಿ ಈ ರೀತಿ ನಡ್ಸ್‌ದು ದೊಡ್ಡವುಕೆ ಸಂಘಟನೆ ತರವು, ಸಣಣವುಕೆ ಪ್ರೀತಿ, ವಿಶ್ವಾಸ, ಒಗ್ಗಟ್ಟ್ ಪ್ರದರ್ಶಿಸಿಕ್ಕೆ ಚಿಕ್ಕ ಕೂಸು ಮಕ್ಕಳಿಂದ್ಲೆ ಕಲ್ಸಿದಂಗೆ ಆದೆತ ನನ್ನ ಅಭಿಪ್ರಾಯ. ಹಿಂಗೆ ದೇಶದ ನಾನಾ ಭಾಗಲಿ ಆಚರಿಸುದು ನಮ್ಮ ಬಾಂಧವ್ಯಕ್ಕೆ ನಾಂದಿ ಹಾಡಿದೆ. ಸಂಗಾತಿಗೆ ನಮನ. ಹೆಚ್ಚಿನ ಸಂಪರ್ಕಕ್ಕಾಗಿ ಈ ಕೆಳಗಿನವರನ್ನು ಸಂಪರ್ಕಿಸುಕುತ ವಿನಂತಿ.

ವಸಂತ : 2445434, ದಿನೇಶ್ : 4418223/4413979 ಧನು : 2445398 P. P. ಸತೀಶ್ : 8268601

**ವರದಿ : ಕರ್ಣಯ್ಯನ ಸಬಿತ ಧನು, ಮದರಾಸ್ (ಚೆನ್ನೈ)**

---

## ಪ್ರಶಂಸೆ

ಸನ್ಮಾನ್ಯರೆ,

ಕೊಡಗು ಸಂಗಾತಿ (ಸೋಣ ತಿಂಗ 15-29ತನಕ) ಕೈ ಸೇರಿತು. ಅಂದವಾಗಿ ಮೂಡಿ ಬರುತ್ತಿದೆ.

ಈ ಸಂಚಿಕೆಯ ಪುಟ 9 ವಲಸೆ ಯಾರು? ಎಲ್ಲಿಂದ? ಎಂಬ ಪ್ರೊ. ಪೂಜಾರಿ ಮೊಣ್ಣಪ್ಪನವರ ಬರಹ ಅತೀ ತೂಕದಿಂದ ಕೂಡಿದೆ. ಸಮತೋಲನದಲ್ಲಿದೆ ಪ್ರತೀಯೊಬ್ಬನು ಓದಿ ಅರ್ಥೈಸಿಕೊಳ್ಳಬೇಕಾಗಿದೆ. ನಮ್ಮ ಮನಸ್ಸು ವಿಶಾಲವಾಗಲಿ, ಪ್ರೀತಿ ತುಂಬಿರಲಿ, ಮಾತು ಮುತ್ತಾಗಿರಲಿ, ಬರವಣಿಗೆ ಬರ್ಕತ್‌ನಲ್ಲಿರಲಿ.

ಯುವ ಪೀಳಿಗೆ ನಮ್ಮ ಆಸ್ತಿ. ದೇಶದ ಆಸ್ತಿ. ಕೊಡಗಿನ ಯುವ ಪೀಳಿಗೆ ಕೊಡಗಿನ ಮಣ್ಣಿನ ನೀರಿನ ಗಾಳಿಯ ಆಸ್ತಿ. ಭೇದಭಾವಕ್ಕೆ ಎಡೆಯಿಲ್ಲ. ಜನಾಂಗಗಳು ಬೇರೆಯಿರಬಹುದು. ಬದುಕಿ ಬಾಳುವ ಜನರು ಒಂದೇ. ಹಿರಿಯರು ಬೆಳಕು ತೋರಬೇಕು.

ನಿನ್ನೆಯದು ಕಳೆಯಿತು. ನಾಳೆಯದು ನಮ್ಮ ಕೈಯಲಿಲ್ಲ. ಗೊತ್ತೂ ಇಲ್ಲ. ಇಂದಿನದು ನಮ್ಮ ಕೈಯಲ್ಲಿದೆ. ಅದೂ ಕ್ಷಣ ಮಾತ್ರ. ಅಷ್ಟರಲ್ಲಿ ಏನೂ ಒಳ್ಳೆಯದು ಸಾಧಿಸಲಿಕ್ಕಾಗುತ್ತದೋ ಅದನ್ನು ತಪ್ಪದೆ ಮಾಡುವ ಯುವ ಪೀಳಿಗೆಗೆ ಭವಿಷ್ಯ ತುಂಬುವ ನಮ್ಮಲ್ಲಿರುವ ಕಿಚ್ಚು, ಕ್ರೌರ್ಯ, ವೈಮನಸ್ಸನ್ನು ನಾವೇ ಇಟ್ಟುಕೊಳ್ಳುವ ಪ್ರೀತಿ, ಪ್ರೇಮ, ವಿಶಾಲತೆಯಲ್ಲಿ ಯುವ ಜನರನ್ನು ಹುರಿದುಂಬಿಸಿ ಮುಂದಿನ ಪ್ರಜೆಗಳಾಗಿ ಪರಿವರ್ತಿಸುವ ಜನಾಂಗ, ಜನರಿಗೆ ದ್ವೇಷಸಾಧನೆ ಜನಾಂಗವನ್ನೇ ಸುಡಲೂ ಬಹುದು. ಇದನ್ನು ತಡೆಯುವ ಒಂದೇ ಮಾರ್ಗ ಪ್ರೀತಿ ಭಾವನೆ.

ಹಿರಿಯರು ಕಿರಿಯರಿಗೆ ಒಳ್ಳೆ ಮಾರ್ಗದರ್ಶನ ನೀಡಲಿ. ಎಲ್ಲರೂ ಒಂದಾಗಿ ಬಾಳುವ ಕಲೆಯನ್ನು ಕಲಿತು ಕಲಿಸುವ. ಪುಟ 15ರಲ್ಲಿ 'ನನ್ನ ರಾಣಿ' ಬರೆದವರು ಮಹಮ್ಮದ್ ಹಾರಿಸ್ ಬಹಳ ಪೊರ್ಲಾಗಿ ಮೂಡಿ ಬಂದ್‌ಟ್ಟು. ಲಾಯ್ಕುಟ್ಟು

ಪುಟ 11ರಲ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ವಿಚಾರ. ನೀವು ವಿಚಾರ ಮಾಡುತ್ತಿರುವುದು ಖಂಡಿತಾ ಒಂದು ಒಳ್ಳೆಯ ಶುಭಸೂಚಕ. ಗೌಡ ಕುಟುಂಬದ ಹೆಸರುಗಳ ಪಟ್ಟಿ ಎಲ್ಲರಿಗೂ ಜ್ಞಾನದ ಅರಿವನ್ನು ಕೊಟ್ಟಿದೆ.

ಗೋತ್ರ ಎಂಬುವುದು ವಿಜ್ಞಾನ. ನನ್ನ ಮಟ್ಟಿಗೆ ಹೇಳುವುದಾದರೆ ಒಂದು ಗೋತ್ರದ ಜನರಲ್ಲಿ ಒಂದೊಂದು ಸ್ವಭಾವ ಇರುತ್ತದೆ. ನೆಂಟಸ್ಥನ ಮಾಡುವಾಗಲು ಗೋತ್ರಗಳು ಬಹುಪಾಲು ಒಳ್ಳೆಯ ದಾರಿ ತೋರಿಸುತ್ತದೆ. ಸ್ವಂತ ಗೋತ್ರದ ನೆಂಟಸ್ಥನ, ವಿರೋಧ ಹವ್ಯಾಸಗಳಿರುವ ಗೋತ್ರಗಳ ಮಿಲನ ಕಠಿಣ. ಆದ್ದರಿಂದ ನಮ್ಮ ಹಿರಿಯರು ನೆಂಟಸ್ಥನವನ್ನು ನಿಶ್ಚೈಸುವಾಗ ಗೋತ್ರವನ್ನು ಗಣನೆಗೆ ತೆಗೆದುಕೊಳ್ಳುತ್ತಿದ್ದರು. ಅದು ಮೂಢ ನಂಬಿಕೆ ಅಲ್ಲ. ಇಂದಿನ ವಿಜ್ಞಾನದ ಗಿಮಿಕ್‌ನ ಹಳೆ ವಿಭಾಗ. ಅದರ ಪ್ರಯೋಜನ ನಾವು ತಿಳಿದುಕೊಳ್ಳದೆ ಕೈಬಿಟ್ಟಿದ್ದೇವೆ. ಕಹಿಯನ್ನು ಅನುಭವಿಸುತ್ತಲೂ ಇದ್ದೇವೆ.

ಪುಟ 10ರಲ್ಲಿ ಅಪೂರ್ವವಾದ ಸಾರ್ಥಕ ಸಂಶೋಧನೆ. ಸಂಶೋಧನೆ ನಿಲ್ಲುವಂತದ್ದಲ್ಲ. ಹರಿಯುತ್ತಿರುತ್ತದೆ. ಸಂಶೋಧಕರ ಹೃದಯದ ಪರಿ ದೌರ್ಬಲ್ಯ, ಪ್ರೀತಿ, ವಿಶ್ವಾಸಗಳನ್ನು ಬಿಂಬಿಸುತ್ತದೆ. ಅಷ್ಟರವರೆಗೆ ಎಲ್ಲಾ ಊಹಾಪೋಹಗಳು ಅದಕ್ಕಾಗಿ ನಾವು ನಮ್ಮ ತಲೆಕೆಡಿಸಿಕೊಳ್ಳುವುದು ಬೇಡ.

ಜನರ ಹಿತಕ್ಕಾಗಿ ನಾಡಿನ ಹಿತಕ್ಕಾಗಿ, ಮುಂದಿನ ಪೀಳಿಗೆಗಳ ಹಿತಕ್ಕಾಗಿ ದುಡಿಯುವ ಇಂದಿನ ಸುಖ ಸಂತೋಷಕ್ಕಾಗಿ ನಾಳೆಯನ್ನು ಬಲಿ ಕೊಡುವುದು ಬೇಡ.

ಜನಾಂಗ ಜನಾಂಗವಾಗಿ ಬಾಳಲಾರದೆ ಹೋದರೆ ಮನುಷ್ಯರಾಗಿ ಬಾಳುವ ನೀವೇನನ್ನುತ್ತೀರಿ.

**ಚೇಂದ್ರಿಮಾಡ ಗ. ಮುತ್ತಪ್ಪ, ಕುಶಾಲನಗರ**

# ಕೊಡಗು ಸಂಗಾತಿ


ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಜಯಲಕ್ಷ್ಮಿಪುರಂ, ಮೈಸೂರು - 570 012.
**ಫೋನ್ : 0821/516771**

**ಮಡಿಕೇರಿಯಲ್ಲಿ ಸಂಗಾತಿ ಕಛೇರಿ**

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 21-16 ಎಲ್. ಐ. ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಸಂಪರ್ಕಿಸುವ ವಿಳಾಸ**

**ಮಣಿ ನಂಗಾರ್**
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ - 571 201
ದೂರವಾಣಿ : 08272/29372

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ - 571 234
ದೂರವಾಣಿ : 08276/73370 (R.)

**ಅಮ್ಮಾಜೀರ ಪೊನ್ನಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು - 04
ದೂರವಾಣಿ - 080/6342822

**ಕಲ್ಲುಮುಟ್ಲು ಬಸಪ್ಪ C/o ನಾರಾಯಣ**
ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್,
ಕೆಂಪೇಗೌಡ ನಗರ, ಬೆಂಗಳೂರು - 19
ದೂರವಾಣಿ - 080/6549669







## ಅರೆಭಾಷಿಕ ವಿಭಾಗ



## ಚಂದಾ ವಿವರ

| | | |
|---|---|---|
| ಜೀವಾವಧಿ ಸದಸ್ಯತನ | - | **2000 ರೂ.** |
| ವಾರ್ಷಿಕ ಚಂದಾ | - | **120 ರೂ.** |
| ಅರ್ಧ ವಾರ್ಷಿಕ | - | **60 ರೂ.** |
| ಬಿಡಿ ಪ್ರತಿ | - | **5 ರೂ.** |

# ಸಂಪಾದಕೀಯ : ಹಣ್ಣುಗಳ ಶೇಖರಣೆ

ಕೊಡಗಿನಲ್ಲಿ ಮರ ಕಾಡಿನ ನಾಶದೊಡನೆ ಕಾಡಿನಲ್ಲಿ ಸಿಗುತ್ತಿದ್ದ ಹಣ್ಣುಗಳೂ ದಿನದಿಂದ ದಿನಕ್ಕೆ ಕಮ್ಮಿಯಾಗುತ್ತಲಿದೆ. ಕೊಡಗಿನಲ್ಲಿ ಈ ಹಿಂದೆ ಇದ್ದ ಹಣ್ಣಿನ ಮರಗಳು ಮಾಯವಾಗುತ್ತಿವೆ. ಪ್ರತಿ ಮನೆತನದ ಬಾಣೆ ಜಾಗಳೆಲ್ಲಾ ಕಾಡು ಕಡಿದು ಕಾಫಿ ತೋಟ ಮಾಡಲಾಗಿದೆ.

ಹಿಂದೆ ಇದ್ದ ರಂಜೊಳ ಹಣ್ಣು, ನೇರಳೆ ಹಣ್ಣು, ಸೀಬೆ ಹಣ್ಣು, ಹಲಸಿನ ಹಣ್ಣು, ಮಾವಿನ ಹಣ್ಣು, ಅಮೆ ಹಣ್ಣು, ಗುಮ್ಮಟೆ ಹಣ್ಣು, ನೆಲ್ಲಿಕಾಯಿ, ಚೀಪೆ ಹಣ್ಣು, ಗೊಟ್ಟೆ ಹಣ್ಣು, ಜಮ್ ನೇರಳೆ ಹಣ್ಣು ಇಡ್‌ಂಜಿ ಹಣ್ಣು, ಮಜ್ಜಿಗೆ ಹಣ್ಣು, ವಾಟೆ ಪುಳಿ, ಜೀರ್‌ಗುಳಿ ಹಣ್ಣು, ಮಡಿಕೆ ಹಣ್ಣು ಮುಂತಾದವುಗಳು ಈಗ ಕಣ್ಮರೆಯಾಗುತ್ತಿವೆ. ಪಕ್ಷಿಗಳಿಗೆ ಸಂಪಿಗೆ ಮರದ ಹಣ್ಣುಗಳು ವರದಾನವಾಗಿದ್ದವು. ಆದರೆ ಈಗೀಗ ಈ ಮರಗಳು ಕಳ್ಳಕಾಕರ ಹಾವಳಿಗೆ ತುತ್ತಾಗಿ ಪಕ್ಷಿ ಕುಲವೇ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುವಂತಾಗಿದೆ.

ಕಾಫಿ ತೋಟ ಮಾಡುವಾಗ ಈ ಹಣ್ಣಿನ ಮರಗಳನ್ನು ಕಡಿದು ಹಾಕುತ್ತಿದ್ದಾರೆ. ಇದರಿಂದಾಗಿ ನಮ್ಮ ಜಿಲ್ಲೆಯ ಪ್ರಾಕೃತಿಕ ಸೌಂದರ್ಯ ಕಡಿಮೆಯಾಗಿ ಹವಾಗುಣವು ಏರುಪೇರಾಗಿದೆ.

ಹಣದ ಆಸೆಯಿಂದ ಇಂತಹ ಪ್ರಾಕೃತಿಕ ಹಣ್ಣಿನ ಮರಗ ನಾಶ ಮಾಡಿ ನಮ್ಮ ಸಸ್ಯ ಸಂಪತ್ತನ್ನು ಬಿಟ್ಟು ಹೊರದೇಶ ನಮ್ಮ ಪ್ರಕೃತಿಗೆ ಒಗ್ಗದ ಹಣ್ಣು ಹಂಪಲುಗಳನ್ನು ಬೆಳೆ ಪ್ರಾರಂಭಿಸಿದ್ದೇವೆ. ಅದರ ಬದಲು ಮೇಲೆ ಹೇಳಿದ ಹಣ್ಣು ಮರಗಳನ್ನು ಅಭಿವೃದ್ಧಿ ಪಡಿಸುವ ಹಾಗೂ ಅವುಗಳಿಂದ ಸಿ ಹಣ್ಣುಗಳನ್ನು ಸಂಸ್ಕರಿಸಿ ಹೆಚ್ಚು ದಿನ ಉಳಿಯುವ ಯಾ ಉಳಿ ಮಾರ್ಗವನ್ನು ಕಂಡು ಹಿಡಿಯಬೇಕು. ಬೇಸಗೆ ಕಾಲದಲ್ಲಿ ನ ಕಾಡುಗಳ್ಲಲಿ ಯಥೇಚ್ಛವಾಗಿ ಸಿಗುವ ಮಾವಿನಕಾಯಿ, ಮಾವಿನ ಹ ಹಲಸಿನಕಾಯಿ, ಹಲಸಿನಹಣ್ಣು ಹಾಗೂ ಬೀಜಗಳನ್ನು ಶೇಖ ಅವುಗಳಿಂದ ವಿವಿಧ ರೀತಿಯ ತಿನಿಸುಗಳನ್ನು ಮಾಡಿದರೆ ಅದೊ ತಾತ್ಕಾಲಿಕ ಉದ್ಯೋಗವು ಆಗುವುದು. ನಮ್ಮಲ್ಲಿಯ ಪ್ರಾಕೃ ಸಂಪತ್ತಿನ ಉಳಿಸುವ ದಾರಿಯಾಗುತ್ತದೆ. ಈ ವಿಷಯದ ಜಿಲ್ಲೆಯಿಂದ ಹೊರಗಿರುವ ನಮ್ಮ ಜನಾಂಗದ ವಿದ್ಯಾವಂತ ಯು ಯುವತಿಯರು ಮುಂದೆ ಬಂದು ಈ ಕಾರ್ಯಕ್ರಮಗಳ ಹಮ್ಮಿಕೊಳ್ಳಬೇಕೆಂದು ಸಂಗಾತಿಯ ಬಿನ್ನಹ.

## ಭಾರತಾಂಬೆಗೆ ಜೈ

ಭಾರತ್ ಮಾತಾಕೀ ಜೈ
ಹಂ ಹೈ ತೇರಾ ಸಾತ್‌ಕೀ
ಹೇ, ಮಾತೆ ಸಾಗುತ್ತಿದ್ದೀಯಾ 2000 ಶತಮಾನಕ್ಕೆ
ಇಲ್ಲ, ಇಲ್ಲ ಸಾಗಿಸುತ್ತಿದ್ದೇವೆ ನಾವು ನಿನ್ನ
100 ಕೋಟಿ ಹಿತವಂಚಕರೊಂದಿಗೆ
ಅದೇ ಹಿಂದಿನ ಜೈಕಾರ, ಶೈಲಿ ಮಾತ್ರ ಹೊಸದು
ಐ ಲವ್ ಮೈ ಇಂಡಿಯಾ, ಇತ್ಯಾದಿ
ಇತ್ತ ಪಾಕಿ, ಅತ್ತ ಚೀನಿ, ಸುತ್ತಲೂ ಹುತ್ತವೇ
ಇವುಗಳಿಗಿಂತ ಭಯಂಕರ ನಾವು ನಾವೇ
ಹಗರಣಗಳ ಸರದಾರರು, ಸುಲಿಗೆ ವಂಚಕರ ನಡುವೆ
ಕುರ್ಚಿಗಾಗಿ, ದೇಶದ ವೆಚ್ಚಕ್ಕಾಗಿ, ಒಗ್ಗಟ್ಟಿನ ಆತನ
ಕಿರುಚಾಟ ! ಜೈ ಭಾರತ್ ಮಾತಾ ! ವಂದೆ ಮಾತರಂ !
ಭಾರತ್ ಮಾತಾಕೀ ಜೈ, ಎಂದನೊಬ್ಬ
ಮನನೊಂದು ಸಂಕಟದಿ, ತಾಯಿ ನಿಲ್ಲಲಿ
ಈ ನಿನ್ನ ಕಣ್ಣೀರು ಒರೆಸುವ ತಂತ್ರ
ಸಾಕು ಬೇಡ ನಿನ್ನ ಮಕ್ಕಳ ಕುತಂತ್ರ
ಬರಲಿ ವಿದೇಶಿ ತಂತ್ರ, ಅರಿವಾಗಲಿ ಅವರ
ಪರಕೀಯ ಪ್ರಪಂಚ, ಎಚ್ಚೆತ್ತಲ್ಲಿ ಇವರೆಲ್ಲಾ
ನಂತರವೇ ನೀ ಸಾಗು ಹೊಸ ಶತಮಾನಕ್ಕೆ
ಹೊಸ ಹೆಜ್ಜೆ, ಹೊಸ ಧ್ವನಿಯೊಂದಿಗೆ
ಭಾರತ್ ಮಾತಕೀ ಜೈ ! ವಂದೇ ಮಾತರಂ !

ಬಾರಿಕೆ ಲಿಂಗರಾಜ್, ತಾವೂರು

## ಹೇ, ನನ್ನ ಸಂಗಾತಿಯೇ ತಿಳ್ದವು ಹೇಳ್ದರ ತಿಳ್ಕಂಕು

೧. ಗೂಡೆಗ, ಔಕ್ಕೊಬ್ಬ ಗಂಡ ಸಿಕ್ಕುವಲ್ಲಿವರೇಗೆ ಕೊರ್ಗುವೆ. ಹೈದಂಗ ಔಕ್ಕೊಬ್ಬ ಹೆ ಸಿಕ್ಕಿದ್ದಲ್ಲಿಂದ ಕೊರ್ಗುವೆ.
೨. ಹತ್ ಹೆತ್ತ ಅತ್ತೆಗೆ - ಸೊಸೆ ಕೂಸ್ ಮೀಸಿಕೆ ಕಲ್ಸಿದಾಂಗೆ.
೩. ತೊಟ್ಲೆಗಾಕ್‌ಕನಾದ ಸಾಲ ತೀರ್‌ಕ್ನ ಮೊದುವೆಗೆ ಸಾಲಾತ್.
೪. ಆನೆ ಸಾಯಕನ ಲಕ್ಷ ರೂಪಾಯಿ ಬಂದದೆ - ದಂತಂದ, ಗೌಡ ಸಾಯಕನ ಲಕ್ಷ ರೂಪಾ ಹೋದೆ - ಬೊಜ್ಜಂದ;
೫. ಮಡದಿ ಮಾತ ಕೇಳ್ದವನ ಮಕ್ಕ, ಮನೆ ಮಾರ್‍ಸಿದೊ ಗಡ.
(ಸ್ವಂತ ಬುದ್ದಿ ಇಲ್ಲದಂವ ಹಾಳಾದೆಂತ ಅಷ್ಟೇ ಹೆಣ್‌ಜನ ತಪ್ಪು ತಿಳಿಕಾಗದ್)
೬. ಹೆತ್ತಿಗೆ ಮುಗ್ಸಿಕೆ ಬೊತ್ತದಷ್ಟ್ ದುಡ್ಡುನವ - ಪುಣ್ಯಾದಿಗ ಹೈದ.
ಅಪ್ಪ್ ದುಡ್ಡ್‌ನವನ ಮೊದುವೆ ಆದೌಳು - ಪುಣ್ಯಾದಿಗೆತ್ತಿ ಗೂಡೆ.
೭. ಜೋಸ್ತಿಗೆ ಸಾಲ ಕೊಡ್ಚಡ - ಸಾಲನೂ ಹೋದೆ ಜೋಸ್ತಿನೂ ಹೋದೆ.
ಜೋಸ್ತಿನ್ನೊಟ್ಟಿಗೆ ಹೆಣ್ತಿನ ಬುಡ್ಚಡ - ಹೆಣ್ತಿನೂ ಹೋದೆ ಮಾನನು ಹೋದೆ
೮. ಚುರ್ಕು ಹೈದ, ಚುರ್ಕು ಗೂಡೆ ಕೂಡಿರೆ - ಪ್ರೇಮಿಸುವೆ
ಚುರ್ಕು ಹೈದ, ಪೆದ್ದು ಗೂಡೆ ಕೂಡಿರೆ - ಅವ್ವ ಕಾಮಿಸಿದೆ
ಪೆದ್ದು ಹೈದ ಚುರ್ಕು ಗೂಡೆ ಕೂಡಿರೆ - ಅವ್ವ ಶೋಷಿಸಿದೆ
ಪೆದ್ದು ಹೈದ ಪೆದ್ದುಗೂಡೆ ಕೂಡಿರೆ - ಜಾಕೆ ಮೊದುವೆ ಮಾಡುವೆ
೯. ಹೈದನ ಬದ್ ಮಾಡ್ವೆಂತ ನೆನ್ಸಿಕಂಡ್ ಗೂಡೆ ಮೊದುವೆ ಆದೆ - ಅಂವ ಬದ್ಲಾದೆ ಇಲ್ಲೆ. ಗೂಡೆ ಈಗಿದ್ದಾಂಗೆ ಇದ್ದದೆಂತ ನೆನ್ಸಿಕಂಡ್ ಹೈದ ಮೊದುವೆ ಆದೆ - ಅವ್ವು ಅವ್ವ ಅಂ ನಂಗಾದೆ
೧೦. ಸಾವುಲಿ ಕಾಂಬಕ್ಕಿಲ್ಲೆ - ಬೊಜ್ಜಲಿ ಉಂಬಕ್ಕಿತ್.

ಎನ್. ಎಸ್. ದೇವಿಪ್ರಸಾದ್, ಸಂಪಾ

# ಆರೋಗ್ಯ ಚಿಂತನೆ

## ಜ್ಞೆ ತಪ್ಪುವುದು : (Coma)

ವ್ಯಕ್ತಿಯೊಬ್ಬ ಇದ್ದಕ್ಕಿದ್ದಂತೆಯೇ ಪ್ರಜ್ಞೆ ತಪ್ಪಿ ಬೀಳುವುದನ್ನು ವು ಅಪರೂಪವಾಗಿ ಕಂಡಿರಬಹುದು. ಇದೊಂದು ಎಲ್ಲರನ್ನೂ ಎರಿಗೊಳಿಸುವ ಪ್ರಸಂಗ ಏನಾಯಿತು? ಏಕೆ ಹೀಗಾಯಿತು? ಈಗ ು ಮಾಡುವುದು? ಎಂಬ ಆತಂಕ ಈ ಸಂದರ್ಭದಲ್ಲಿ ಎದ್ದು ಖತ್ತದೆ. ಏನೂ ತೋಚದ ಪರಿಸ್ಥಿತಿ.

ನಿಜ ! ಇದೊಂದು ಪೇಚಿಗೆ ಈಡು ಮಾಡುವ ಪರಿಸ್ಥಿತಿಯೆ. ವೊಂದು ಸಂದರ್ಭದಲ್ಲಿ ವೈದ್ಯರೂ ತಲೆಕೆರೆದುಕೊಳ್ಳಬೇಕಾಗುಬಹುದು! ಸಂದರ್ಭದಲ್ಲಿ ಅತ್ಯಂತ ಚುರುಕಾಗಿ ಪ್ರಜ್ಞೆ ತಪ್ಪಿದ್ದಕ್ಕೆ ಕಾರಣ ಡು ಹಿಡಿದು ಯೋಗ್ಯ ರೀತಿಯಲ್ಲಿ ಚಿಕಿತ್ಸೆ ನೀಡಬೇಕಾಗುತ್ತದೆ. ಲ್ಲದಿದ್ದಲ್ಲಿ ವ್ಯಕ್ತಿ ಇಹಲೋಕದತ್ತ ಪ್ರಯಾಣ ಬೆಳೆಸಬಹುದು !

ಈ ರೀತಿ ಪ್ರಜ್ಞೆ ತಪ್ಪುವುದು ಏಕೆ? ಕಾರಣಗಳೇನು? ಿಹಾರವೇನು?

**ರಣಗಳು :**

ಪ್ರಜ್ಞೆ ತಪ್ಪುವುದಕ್ಕೆ ಅತ್ಯಂತ ಸಾಮಾನ್ಯವಾದ ಸರಳ ರಣಗಳಿಂದ ಹಿಡಿದು ಗಂಭೀರ ಸ್ವರೂಪದ ಕಾಯಿಲೆಗಳವರೆಗೆ ರಣಗಳ ಉದ್ದನೆಯ ಪಟ್ಟಿಯನ್ನು ಮಾಡುತ್ತಾ ಹೋಗಬಹುದು. ಜ್ಞೆ ತಪ್ಪಿದ ಘಟನೆಯ ಪೂರ್ಣವಿವರ, ರೋಗಿಯ ಹಿಂದಿನ ರಿತ್ರೆಯನ್ನು ಪೂರ್ಣವಾಗಿ ವೈದ್ಯರ ಬಳಿ ಹೇಳುವುದರಿಂದ ವೈದ್ಯರು ಜ್ಞೆ ತಪ್ಪಿದ್ದಕ್ಕೆ ಕಾರಣವನ್ನು ತಿಳಿದು ಸೂಕ್ತ ಚಿಕಿತ್ಸೆ ನೀಡಬಲ್ಲರು.

ವ್ಯಕ್ತಿಯೊಬ್ಬ ಬೆಳಗಿನ ಜಾವ ಸರಿಯಾಗಿ ಫಲಹಾರ ಮಾಡಿಲ್ಲ. ಫೀಸಿನಲ್ಲಿ ಕೆಲಸ ಮಾಡುತ್ತಾ ಮಧ್ಯಾಹ್ನದ ವೇಳೆ ಪ್ರಜ್ಞೆ ತಪ್ಪುತ್ತಾರೆ. ಇದು ರಕ್ತದಲ್ಲಿನ ಗ್ಲುಕೋಸ್ ಅಂಶ ಕಡಿಮೆಯಾದುದರಿಂದ ಇರಬಹುದು. ವ್ಯಕ್ತಿಗೆ ಬಾಯಿ ಮೂಲಕ ಸ್ವಲ್ಪ ಗ್ಲುಕೋಸ್, ಸಕ್ಕರೆ, ಹಣ್ಣಿನರಸ ಇತ್ಯಾದಿ ಕೊಟ್ಟರೆ ಸರಿಯಾಗಬಹುದು.

ಎನ್.ಸಿ.ಸಿ.(N.C.C.) ಶಿಬಿರದಲ್ಲಿ ಉರಿ ಬಿಸಿಲಿನಲ್ಲಿ ಹಲವಾರು ಗಂಟೆಯವರೆಗೆ ಕವಾಯತ್ ಮಾಡುತ್ತಿರುವಾಗ ವಿದ್ಯಾರ್ಥಿಯೊಬ್ಬ ಡಬ್' ಅಂತ ಕೆಳಕ್ಕೆ ಉರುಳಿ ಬೀಳಬಹುದು. ಬಿಸಿಲಿನ ಅತಿಯಾದ ಶಾಖದಿಂದ, ಜೊತೆಗೆ ಬಹಳ ಕಾಲ ನಿಂತುಕೊಂಡೆ ಇದ್ದುದರಿಂದ ಮೆದುಳಿಗೆ ರಕ್ತ ಸರಬರಾಜು ಇಳಿಮುಖವಾಗಿ ಪ್ರಜ್ಞೆ ತಪ್ಪಬಹುದು. ವ್ಯಕ್ತಿಯನ್ನು ನೆರಳಿಗೆ ಒಯ್ದು, ಮುಖ ಮೈಯ್ಯನ್ನೆಲ್ಲಾ ತಣ್ಣೀರಿನಿಂದ ಒರೆಸಿದಲ್ಲಿ ಸರಿಯಾಗಬಹುದು.

ವ್ಯಕ್ತಿಯೊಬ್ಬ ಕೈಕಾಲು ದೇಹವನ್ನು ಅದುರುತ್ತಾ ಇದ್ದಕ್ಕಿದ್ದಂತೆಯೇ ಬಿದ್ದು ಹೋಗುತ್ತಾನೆ. ಕೈಕಾಲು ಮಡಚಲು ಸಾಧ್ಯವಾಗದೆ ಗಟ್ಟಿಯಾಗಿರುತ್ತದೆ. ಬಾಯಿಂದ ಜೊಲ್ಲು ಬರುತ್ತದೆ ವ್ಯಕ್ತಿಗೆ ಮೂರ್ಛೆರೋಗ (ಫಿಟ್ಸ್) ಇರಬಹುದು.

ವ್ಯಕ್ತಿಗೆ ಅಧಿಕ ರಕ್ತದೊತ್ತಡ ಇದೆ. ಸರಿಯಾಗಿ ಔಷಧ ಸೇವಿಸುತ್ತಿಲ್ಲ. ಇದ್ದಕ್ಕಿದ್ದಂತೆಯೇ ಕುಸಿದು ಬೀಳುತ್ತಾನೆ. ದೇಹದ ಒಂದು ಭಾಗ ಪೂರ್ತಿ ಸ್ವಾಧೀನ ಕಳೆದುಕೊಳ್ಳುತ್ತದೆ. ಮಿದುಳಿನ ರಕ್ತಸ್ರಾವವಿರಬಹುದು, ಲಕ್ವ ಹೊಡೆದಿರಬಹುದು.

ಮಗು ನಾಣ್ಯ, ಸಣ್ಣ ಆಟದ ವಸ್ತು ಇತ್ಯಾದಿ ಹಿಡಿದು ಆಟವಾಡಿಕೊಂಡಿದೆ. ಇದ್ದಕ್ಕಿದ್ದಂತೆ ಪ್ರಜ್ಞೆ ತಪ್ಪಬಹುದು. ಉಸಿರಾಡಲು ಪ್ರಯಾಸಪಡುತ್ತಿರಬಹುದು. ಮುಖವೆಲ್ಲಾ ನೀಲಿಬಣ್ಣ ತಾಳಬಹುದು. ಮಗು ಆಟದ ವಸ್ತುವನ್ನು ಬಾಯಿಯೊಳಗೆ ಹಾಕಿಕೊಂಡಿರಬಹುದು. ಅದು ಶ್ವಾಸನಾಳದಲ್ಲಿ ಸೇರಿಕೊಂಡು ಅಡಚಣೆಯನ್ನುಂಟು ಮಾಡುತ್ತಿರಬಹುದು ಅನ್ಯವಸ್ತುವನ್ನು ಹೊರಕ್ಕೆ ಹಾಕದೆ ಪರಿಸ್ಥಿತಿ ಸುಧಾರಿಸಲಾರದು.

ವ್ಯಕ್ತಿಯೊಬ್ಬನಿಗೆ ಬಿದ್ದು ತಲೆಗೆ ಏಟಾಗಿದೆ. ಕೂಡಲೇ ಆತನ ಪ್ರಜ್ಞೆ ತಪ್ಪಬಹುದು. ಅಥವಾ ಕೆಲವೊಮ್ಮೆ ಆತ ಚೆನ್ನಾಗಿಯೇ ಮಾತಾಡಿಕೊಂಡಿರಬಹುದು, ಕೆಲ ಗಂಟೆಗಳ ನಂತರ ಪ್ರಜ್ಞೆ ತಪ್ಪಬಹುದು. ಇದು ಬಹಳ ಅಪಾಯಕಾರಿ ಚಿಹ್ನೆ (ತಲೆಯ ಒಳಗೆ ರಕ್ತಸ್ರಾವವಾಗುತ್ತದೆ ಎಂದರ್ಥ) ತಲೆಗೆ ಪೆಟ್ಟು ಬಿದ್ದಲ್ಲಿಂದ ನಡೆದ ಘಟನೆಗಳನ್ನು ವಿವರವಾಗಿ ವೈದ್ಯರ ಬಳಿ ತಿಳಿಸಬೇಕು.

ಅತಿಯಾದ ಮದ್ಯಸೇವನೆ (ರಕ್ತದಲ್ಲಿ ಅಲ್ಕೋಹಾಲ್‌ನ ಮಟ್ಟ ಅತಿಯಾದ ಮಟ್ಟಕ್ಕೆ ಏರುವುದರಿಂದ)ಸಕ್ಕರೆ ಕಾಯಿಲೆಯಿರುವ ವ್ಯಕ್ತಿಯಲ್ಲಿ ಇದ್ದಕ್ಕಿದ್ದಂತೆ ರಕ್ತದ ಸಕ್ಕರೆ ಪ್ರಮಾಣ ಕಡಿಮೆಯಾಗುವುದು, (ಇನ್ಸುಲಿನ್ ಇಂಜೆಕ್ಷನ್ ನಂತರ, ಸಕ್ಕರೆ ಇಳಿಸುವ ಮಾತ್ರೆ ಸೇವಿಸಿದ ನಂತರ, ಸರಿಯಾಗಿ ಆಹಾರ ಸೇವಿಸದೆ ಇರುವುದು ಇತ್ಯಾದಿ), ಮೆದುಳು ಜ್ವರ, ತೀವ್ರವಾದ ನೋವು, ಹೃದಯಾಘಾತ, ತೀವ್ರತರನಾದ ಸೋಂಕು, ವ್ಯಕ್ತಿ ವಿಷ ಸೇವಿಸುವುದು, ನೀರಿನಲ್ಲಿ ಮುಳುಗುವುದು, ಹಾವು, ಚೇಳು ಕಡಿತ ಹೀಗೆ ಕಾರಣಗಳ ಪಟ್ಟಿಯನ್ನೇ ಮಾಡುತ್ತಾ ಹೋಗಬಹುದು. ಕೆಲವೊಮ್ಮೆ ತೀವ್ರ ತರನಾದ ಮಾನಸಿಕ ಉದ್ವೇಗ, ಭಯ ಇತ್ಯಾದಿ ಸಂದರ್ಭಗಳಲ್ಲಿ ಸಹ ಪ್ರಜ್ಞೆ ತಪ್ಪಬಹುದು.

**ಪ್ರಥಮ ಚಿಕಿತ್ಸೆ :** ವ್ಯಕ್ತಿಯೊಬ್ಬನಿಗೆ ಪ್ರಜ್ಞೆ ತಪ್ಪಿದಲ್ಲಿ ಕೆಲವೊಂದು ಕ್ರಮಗಳನ್ನು ಅತ್ಯಂತ ತುರ್ತಾಗಿ ಕೈಗೊಳ್ಳಬೇಕಾಗುತ್ತದೆ. ಸ್ವಲ್ಪ ಸಮಯದಲ್ಲಿ ಪ್ರಜ್ಞೆ ಬಾರದಿದ್ದಲ್ಲಿ ಕೂಡಲೇ ವೈದ್ಯರ ಬಳಿ ವ್ಯಕ್ತಿಯನ್ನು ಒಯ್ಯಬೇಕು.

1. ಪ್ರಜ್ಞೆ ತಪ್ಪಿದುದಕ್ಕೆ ಕಾರಣವೇನು? ಎಂಬ ಬಗ್ಗೆ ಚಿಂತಿಸಿ. ಕಾರಣ ನಿಖರವಾಗಿ ತಿಳಿದು ಬಂದಿಲ್ಲ, ಅದಕ್ಕೆ ಅನುಗುಣವಾಗಿ ಕ್ರಮ ಕೈಗೊಳ್ಳಿ.

2. ವ್ಯಕ್ತಿಯನ್ನು ಒಂದು ಪಕ್ಕಕ್ಕೆ ತಿರುಗಿಸಿ ಮಲಗಿಸಿ (ಇದರಿಂದ ಉಸಿರಾಟ ಸಲೀಸಾಗಿ ಆಗುತ್ತದೆ)

3. ಆತನ ಬಾಯನ್ನು ಬಿಡಿಸಿ ಬಾಯೊಳಗಿರುವ ಜೊಲ್ಲನ್ನು ವಸ್ತ್ರದ ಮೂಲಕ ತೆಗೆಯಿರಿ.

4. ವ್ಯಕ್ತಿಗೆ ಫಿಟ್ಸ್ ಬರುತ್ತಿದ್ದಲ್ಲಿ ಹಲ್ಲು ಕಡಿತದಿಂದ ನಾಲಿಗೆಯನ್ನು ಕಚ್ಚಿಕೊಳ್ಳುವುದನ್ನು ತಪ್ಪಿಸಲು ಕರವಸ್ತ್ರವನ್ನು ಮಡಚಿ ಹಲ್ಲಿನ ನಡುವೆ ಇಡಿ.

5. ವ್ಯಕ್ತಿ ವಿಷವಸ್ತು ನುಂಗಿದ್ದಲ್ಲಿ ವಿಷ ಸೇವಿಸಿದ ಬಾಟ್ಲಿ ಇತ್ಯಾದಿ ಇದ್ದಲ್ಲಿ ಎಸೆಯದೆ ವೈದ್ಯರಲ್ಲಿಗೆ ಕೊಂಡೊಯ್ಯಿರಿ. (ಚಿಕಿತ್ಸೆ ನೀಡಲು ಅವರಿಗೆ ಸಹಕಾರಿಯಾಗಬಲ್ಲದು)

4ನೇ ಪುಟಕ್ಕೆ

# ಹೊಟ್ಟೆ ಮರ್ಟಾಗ

ನಮ್ಮ ಸೋಂಪ ಬಾರೀ ಗಡಿಬಿಡಿ ಮನ್ಸ. ಬೆಳಿಗ್ಗೆ ಆರ್ ಗಂಟೆಗೆ ಎದ್ದು ಮೈಸೂರ್ಗೆ ಹೊರ್ಡೋಕುತ ಗ್ಯಾನ ಮಾಡಿ ಮಲಗಿದ್ದವಂಗೆ, ಬೆಳಿಗ್ಗೆ ಗಂಟೆ ಏಳಾದ್ರೂ ಎಚ್ಚರ ಆತ್ಲೆ. ಬೇಗ ಎಬ್ಬಿಸಿತ್ಲೆಂತೇಳಿ ಹೆಣ್ಣಿಗೆ ಬೈದ ತಪ್ಪಿಗೆ, ಬೆಳಿಗ್ಗೆನ ತಿಂಡಿನೂ ಸಿಕ್ಕದೇ ಹೋತು. ಇನ್ನು ತಿಂಡಿಗೆ ಕಾದ್ರೆ ಆದ್ಲೆಂತೇಳಿ, ಯಾವುದೋ ಒಂದು ಷರ್ಟುನ ಇಸ್ತ್ರಿನೂ ಹಾಕದೆ ಮೈಗೆ ತುರುಕ್ಯೊಂಡು, ಬಸ್‌ಸ್ಟಾಂಡ್ ತಲುಪುಕಾಕನ, ಅವ್ನ ಮೈಸೂರ್ ಬಸ್ಸು ಒಂದು ಮೈಲು ದೂರಂದ ಹಾರ್ನ್ ಹಾಕ್ಯೊಂಡ್ ಬಾತ್. ಆ ಬಸ್ಸುಲಿ ಇಡೀ ದೇಶದ ಜನನೇ ತುಂಬಿ ಹೋಗಳನಾಂತ ಗ್ಯಾನ ಮಾಡ್ಯಾಕನ, ಒಂದೆರಡು ಜನ ಇಳದದ್ರ ನೋಡಿ, ನೆಮ್ಮದಿಯ ಉಸುರು ಬುಟ್ಟು ಬಸ್ ಹತ್ತಿಕೊಂಡ್ತ್ ನಮ್ಮ ಸೋಂಪ.

ಮೈಸೂರು ತಲುಪುಕಾಕನ ಗಂಟೆ ಒಂದಾಗಿತ್ತ್. ಸೋಂಪಂಗೊ ಹೊಟ್ಟೆ ಹಸಿವುಲಿ, ಕಣ್ಣು ಕಾಂಬದ್ಲೆ. ಹೊಟ್ಟೆಲಿ ಒಂದು ದೊಡ್ಡಾ ಇಲಿ ಬಾರಿ ಲೂಟಿ ಮಾಡ್ದಂಗೆ, ಹೊಟ್ಟೆಲಿದ್ದ ಕರುಳೆಲ್ಲ ಕುಂಯ್...... ಉಂಯ್.... ಅಂತ ಪದ ಹೇಳ್ದಂಗೆ ಅನುಭವ ಆತುಟ್ಟು ಗಡ. ಹೊಟ್ಟೆಗೆ ಏನಾರು ಸ್ವಲ್ಪ ಹಾಕದೆ, ಮುಂದೆ ಹೆಜ್ಜೆ ಇಡಿಕೆ ಸಾಧ್ಯ ಇಲ್ಲೆ. ಬಸ್ ಸ್ಟಾಂಡುಂದ ಬಲಕ್ಕೆ ತಿರ್‍ಗಿ, ಹೋಟೇಲ್‌ನ ಬೋರ್ಡ್ ನೋಡಿಕೆ ಪುರುಸೊತ್ತಿಲ್ದೆ, ಯಾವುದೋ ಒಂದು ಹೋಟೆಲ್‌ಗೆ ನುಗ್ಗಿತ್. ಇನ್ನು ಅಲ್ಲಿ, ಅನ್ನ - ಸಾರುನ ಕಲ್ಸಿ -ಬೆರ್‍ಸಿ ತಿಂಬಕಾಕನ ಜೀವ ಹೋದೇತೇಳಿ, ಹೊಟೇಲ್ ಮಾಣಿನ ಕರ್ದು, ಇದ್ದ ಶಕ್ತಿನ್ನೆಲ್ಲ ಉಪಯೋಗ್ಸಿ, ಒಂದ್ ಪ್ಲೇಟು ವಡೆ ತಾಕೆ ಆರ್ಡರ್ ಮಾಡ್ತ್. ಮಾಣಿ ವಡೆ ತಂದಿಟ್ಟದ್ದೇ ತಡ, ಈ ಸೋಂಪ ಗಬ - ಗಬಾತ ತಿಂಬಕೆ ಸುರು ಮಾಡ್ತ್. ಹಾಂಗೆ ತಿಂಬಕ್ಯಾಕನ ಅವ್ನ ಬಾಯಿಂದ ಬಂದ ಒಂದು ದೊಡ್ಡ ಸಬ್ಧಕೆ(ಶಬ್ದ) ಅವ್ನ ಮುಂದೆ ಟೇಬಲ್ಲಿ ಕುದ್ದ ಜನಗ, ಒಮ್ಮೆ ಹಿಂದೆ ತಿರುಗಿ ನೋಡ್ರೊ. ಹಾಂಗೆ ನೋಡ್ಯಾಕನ ಸೋಂಪನ ಕೈನ ರೋಮ ಎಲ್ಲ ನೆಟ್ಟಂಗಾಗಿತ್ತ್. ಜಗಿಯದ್ನ ನಿಲ್ಸಿ, ಬಾಯ್ಗೆ ಕೈ ಹಾಕಿ ನೋಡ್ಯಾಕನ, ವಡೆ ಒಟ್ಟಿಗೆ ಒಂದು ದವಡೆಹಲ್ಲು ಸಿಕ್ಕಿತ್ತ್ ! ಆಗ... ಸೋಂಪಂಗೆ, ಬಾಯ್ಲಿ ಇದ್ದದರೆಲ್ಲ ತೆಗ್ದು, ಮಾಣಿನ ಮುಖಕೆ ಬಿಸಾಕೋಕು ಅಂತ ಸಿಟ್ಟು ಬಂದಿತ್ತ್. ಹ್ಯಾಂಗೆ ಬಯ್ಯೋ ಗೊತ್ತಾಗದೆ ಸ್ವಲ್ಪ ಹೊತ್ತು ಕೊತ್ತಿನಂಗೆ ಸುಮ್ಮನೆ ಕುದ್ದತ್. ಹೊತ್ತು ಬುಟ್ಟು, "ಏನ್ರೀ ಇದು?..... ವಡೆಯಲ್ಲಿ ಹಲ್ಲು !!" ರೇಗಿತ್ತ್. ಮುಂದಿನ ಟೇಬಲ್‌ಗೆ ಕಾಫಿ ತಾತಿದ್ದ ಮಾಣಿ, ಅ ನಿಂತ್, ಸೋಂಪನ ಕೈಂದ, ಆ ಹಲ್ಲುನ ತಕ್ಕಂಡ್, ಹಿಂದೆ ಮು ತಿರುಗ್ಸಿ ನೋಡ್ತ್. ಅಂವಂಗೂ ಇದು ಹಲ್ಲೂತ ಗೊತ್ತಾ ಹೌದೂತ ಒಪ್ಪಿಕೊಂಡ್ರೆ ಹೊಟೇಲ್‌ನ ಮರ್‍ಯಾದೆ ಹೋದೇತೇಳಿ ' ಸಕ್ಕರೆ ಗಟ್ಟಿನೇ' ತ್ಹೇಳಿ ವಾದ ಸುರು ಮಾಡ್ತ್. ಏನೇ ಆದ್ರೂ, ಇ ತಮ್ಮ - ತಮ್ಮ ವಾದ ಬುಡದೆ ಜಗಳ ಮುಂದುವರೆಸ್ಯಾಕನ, ಹ ಕಡ್ಮೆ ಊರುನ ಜನ ಎಲ್ಲ ಬಂದು ಗುಂಪು ಗೂಡ್ರೊ. ಇನ್ನು ಇವ ವಾದ ಮಾಡಿ ಪ್ರಯೋಜನ ಇಲ್ಲೆತ್ಹೇಳಿ, ಸೋಂಪ ವಡೆನ ದುಡ್ಡು ಕೊಡ್ದೆ ಅಲ್ಲಿಂದ ಜಾಗ ಖಾಲಿ ಮಾಡ್ತ್. ಹೊಟೇಲ್ ಮಾಣಿ ಆದೇ ಬ್ಯಾಕಾಗಿತ್ತ್. ಸೋಂಪ ಮತ್ತೆ ಬಸ್‌ಸ್ಟಾಂಡುಂದ ಸರಸ್ವತಿಪುರ ಆಟೋ ಮಾಡ್ಕಂಡ್ ಹೋತು. ಹೊಟೇಲ್‌ಲಿ ನಡ್ದ ಜಗಳಂದಾ ಸೋಂಪಂಗೆ ಬಾಯಿ ತೊಳೆಯಕೆ ಪುರುಸೊತ್ತಾತ್ಲೆ. ಆಟೋ ಸುಮಾ ಅರ್ಧದಾರಿ ತಲುಪುರಾಕನ, ಅವ್ನ ನಾಲಿಗೆ, ಹಲ್ಲು ಸಂಧಿನ್ನೆ ಸವರಿಕೊಂಡು ಬಾತ್ತ್. ಏನೋ ಖಾಲಿ - ಖಾಲಿ ಸಿಕ್ಕಿದಂಗಾತ ಬಾಯಿಗೆ ಬೆರಳು ಹಾಕಿ ನೋಡ್ಯಾಕನ..... ಎಂತದು..... ಸೋಂಪ ಒಂದು ದವಡೆ ಹಲ್ಲೇ ಇಲ್ಲೆ ! ಈಗ, ಸೋಂಪನ ಸೊಡ್ಡು ಹ್ಯಾಂಗಾಗಿರೋ ನೀವೇ ಗ್ಯಾನ ಮಾಡಿ.

ಕು. ಝಾನ್ಸಿ. ದೇವಯ್ಯ. ಕಟ್ರತನ, ಬಿ.
ಚಿಕ್ಕಮಗಳೂರು ಜ

✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡

3ನೇ ಪುಟದಿಂದ

6. ಉಸಿರಾಟ ದುರ್ಬಲವಾಗಿದ್ದಲ್ಲಿ ಕೃತಕ ಉಸಿರಾಟ, ಹೃದಯ ಬಡಿತ ನಿಂತಿದ್ದಲ್ಲಿ ಕೈಗಳಿಂದ ಬಲವಾಗಿ ಎಡಭಾಗದ ಎದೆಯ ಮೇಲೆ ಒತ್ತಿ ಮಸಾಜ್ ಮಾಡಬೇಕಾಗುತ್ತದೆ.

7. ಮಂತ್ರವಾದಿಯನ್ನು ಕರೆಸುವುದು, ಬೂದಿ ಹಚ್ಚುವುದು, ಕೋಳಿ ಕುಯ್ಯಿಸುವುದು ಇತ್ಯಾದಿ ! ಮೂಢ ನಂಬಿಕೆಗಳ ಪ್ರದರ್ಶನ ಬೇಡವೇ ಬೇಡ. ಕೂಡಲೇ ರೋಗಿಯನ್ನು ವೈದ್ಯರ ಬಳಿ ಕರದೊಯ್ಯಿರಿ.

ಡಾ. ಪ್ರವೀಣ ಎನ್. ಎಸ್.
M.B.B.S., M.D. (OBG), D.N.B.
ಕೇರಳ

✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡

## ಮರೆಯದಿರು ನನ್ನ

ಮುದ್ದಿನ ಕಣ್ಮಣಿ ಹಿತ
ನೀ ಯಾರ ಸುತ
ನಂಗೊತ್ತು ಅಶೋಕ ಬಾವ ನಿನ್ನ ಪಿತ
ಪ್ರೀತು ಅಕ್ಕ ನಿನ್ನ ಮಾತೆ
ಕೊಲ್ಯದ ಲಿಂಗರಾಜು, ಪಾರ್ವತಿ
ನಿನ್ನ ಅಜ್ಜಿ, ತಾತ
ಇನ್ನೊಬ್ಬ ಇದಾನೆ ಅವ ನಿಂಗೆ ಗೊತ್ತ
ಅವನೇ ನಿನ್ನ ಮಾಮ ಜೀವನ್ ಅಂತ
ಅಂಕಲ್ ರವಿ ಬಾವ
ಅತ್ತೆಯರು ತಾರ ಮತ್ತು ಗೀತ
ಇವರೆಲ್ಲರ ಜೊತೆಯಲ್ಲಿ
ನನ್ನ ಮರಿಬೇಡ ಹಿತ

ಮನೋಜ್
ಕೊಲ್ಯದ ಮನೆ, ಬೆಂಗಳೂರು



✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡✡

# ಮ್ಮ ಲೇಖಕರ ಪರಿಚಯ :



ಶ್ರೀಮತಿ ಬಿಟ್ಟೀರ ಚೊಂದಮ್ಮ ಶಂಭು
ಬೆಂಗಳೂರು

ಮಡಿಕೇರಿ ತಾಲೂಕು, ಬೆಂಗ್‌ನಾಡಿನ ಬಿ. ಬಾಡಗ ಗ್ರಾಮದ ಡಕಂಡಿರ ಪೂವಯ್ಯ ಮತ್ತು ಅಕ್ಕಮ್ಮ ದಂಪತಿಗಳ ದ್ವಿತೀಯ ತ್ರಿಯಾಗಿ 1956ನೇ ಇಸವಿಯಲ್ಲಿ ಹುಟ್ಟಿದರು. ಇವರು ಪ್ರೈಮರಿ ದ್ಯಾಭ್ಯಾಸವು ಅದೇ ಗ್ರಾಮದ ಸರಕಾರಿ ಶಾಲೆಯಲ್ಲಿಯೂ ಪ್ರೌಢ ುತ್ತು ದ್ವಿತೀಯ ಪಿ.ಯು.ಸಿ.ಯೂ ಚೇರಂಬಾಣೆಯ ಅರುಣಾ ಜೂನಿಯರ್ ಕಾಲೇಜಿನಲ್ಲಿ ಮುಗಿಸಿದರು.

ಆ ವೇಳೆಗೆ ಇವರ ತಂದೆಯವರ ಆರ್ಥಿಕ ಪರಿಸ್ಥಿತಿ ಸರಿಯಿಲ್ಲದ ಾರಣ ಬೆಂಗಳೂರಿನಲ್ಲಿ ಹೊಸದುರ್ಗ ಸಿಮೆಂಟ್ ಮತ್ತು ಕೆಮಿಕಲ್ಸ್ ಫ್ಯಾಕ್ಟರಿಯಲ್ಲಿ ಬೆರಳಚ್ಚುಗಾರ್ತಿಯಾಗಿ ಕೆಲಸಕ್ಕೆ ಸೇರಿದರು. ತದನಂತರ ಬೆಂಗಳೂರಿನ ಆಚಾರ್ಯ ಪಾಠಶಾಲಾ ಸಂಜೆ ಕಾಲೇಜಿನಲ್ಲಿ ಪದವಿಯನ್ನು ಮುಗಿಸಿದರು. ಆರ್ಥಿಕವಾಗಿ ಸಹಕರಿಸಿ ಧೈರ್ಯತುಂಬಿ ಬೆಂಗಳೂರಿಗೆ ಹೋಗಲು ಸಹಕರಿಸಿದವರು ಇವರ ಗುರುಗಳಾದ ಚೇರಂಬಾಣೆಯ ಅರುಣಾ ಕಾಲೇಜಿನ ಶ್ರೀ ಎಚ್. ಆರ್. ಬಸಪ್ಪನವರು. ಇವರನ್ನು ಸದಾ ನೆನೆಯುತ್ತಿರುತ್ತಾರೆ. ಅದೇ ಕಾಲೇಜಿನ ಪ್ರಾಂಶುಪಾಲರಾದ ವಸಂತನವರ ಸಹಕಾರ ಸಹ ಅಘೋರವಾದುದೆನ್ನುತ್ತಾರೆ. ತದನಂತರ ನೈತಿಕ ಧೈರ್ಯ, ಸ್ಥೈರ್ಯ ಕೊಟ್ಟು ಸೂಕ್ತ ಸಲಹೆ ನೀಡಿದವರು ಈಗಿನ ಕರ್ನಾಟಕ ಪ್ರದೇಶ ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿರುವ ಶ್ರೀ ಬಿ. ಎ. ಹಸನಬ್ಬರು. ಇವರೆಲ್ಲರ ಪ್ರೀತಿ, ವಿಶ್ವಾಸ, ಸಹಕಾರವೇ ಜೀವನದಲ್ಲಿ ಏನಾದರೊಂದು ಸಾಧನೆ ಮಾಡಬೇಕೆನ್ನುವ ಛಲ, ಅದರ ಪರಿಣಾಮವೇ ಲೇಖಕಿಯಾಗಲು ಕಾರಣವೆನ್ನುತ್ತಾರೆ ಶ್ರೀಮತಿ ಚೊಂದುರವರು.

ಚೊಂದುರವರ ವಿವಾಹವು 1979ರಲ್ಲಿ ಪಾರಾಣೆ ಗ್ರಾಮದ ಬಿಟ್ಟೀರ ಈರಪ್ಪನವರ ಮಗ ಶಂಭುರವರೊಡನೆ ಆಯಿತು. ಇವರು ಬೆಂಗಳೂರಿನ ಎಚ್. ಎಂ. ಟಿ. ಕಾರ್ಖಾನೆಯ ಮುಖ್ಯ ಕಛೇರಿಯಲ್ಲಿ ಕಮರ್ಷಿಯಲ್ ಆಫೀಸರ್ ಆಗಿ ಇದ್ದಾರೆ. ಇವರಿಗೆ ಇಬ್ಬರು ಹೆಣ್ಣು ಮಕ್ಕಳು. ಮೊದಲನೆಯವಳು ಕು. ಅರ್ಚನಾ, ಐಡಿಯಾ ಹಾಗೂ ಜೆ.ಎಸ್.ಎಸ್. ಪಾಲಿಟೆಕ್ನಿಕ್‌ನಲ್ಲಿ ಇಂಟೀರಿಯರ್ ಕೋರ್ಸು ಮತ್ತು ಎನ್. ಐ. ಐ. ಟಿ ಕಂಪ್ಯೂಟರ್ ಮಾಡುತ್ತಿದ್ದಾಳೆ. ಎರಡನೆಯವಳು ಕು. ಚೇತನಾ ಬೆಂಗಳೂರಿನಲ್ಲಿ ಪಿ.ಯು.ಸಿ. ಮಾಡುತ್ತಿದ್ದಾಳೆ.

ಚೊಂದಮ್ಮನವರಿಗೆ ಒಬ್ಬಳು ಅಕ್ಕ ಆರು ಜನ ತಂಗಿಯರು ಮತ್ತು ಒಬ್ಬ ತಮ್ಮನಿದ್ದಾನೆ. ಯಜಮಾನರ ಪ್ರೀತಿ ಸಹಕಾರ, ಪ್ರೋತ್ಸಾಹದಿಂದ ಸ್ವಂತ ಉದ್ಯೋಗ (Beauty parlour) ನಡೆಸುತ್ತಿದ್ದಾರೆ. ಜೊತೆಗೆ ಎಲ್.ಐ.ಸಿ. ಏಜೆನ್ಸಿಯನ್ನು ಸಹ ಮಾಡುತ್ತಿದ್ದಾರೆ. ಬಿಡುವಿನ ವೇಳೆಯಲ್ಲಿ ಮನೆ ಕೆಲಸಗಳ ಜೊತೆಗೆ ಹಲವಾರು ಕೈಗಾರಿಕೆ ಕೆಲಸಗಳನ್ನು ಸಹ ಮಾಡುತ್ತಿರುತ್ತಾರೆ. ಅಲ್ಲದೆ ಪುಸ್ತಕ ಓದುವುದು, ಅಧ್ಯಾತ್ಮಿಕ ಚಿಂತನೆ, ಸಂಗೀತ ಅಭ್ಯಾಸ, ಸತ್ಸಂಗ ಇವು ಇವರ ನೆಚ್ಚಿನ ಹವ್ಯಾಸಗಳು. ಇವರಿಗೆ ಬಹು ಪ್ರಿಯವಾದ ಇನ್ನೊಂದು ಕೆಲಸವೆಂದರೆ ಆದರ್ಶ ಪತಿಯೊಂದಿಗೆ ಜಗಳವಾಡುವುದು. "ಹ್ಞಾಂ" ಜಗಳ ಎಂದರೆ ಅದೊಂದು ತರಹ ಮುದ್ದಣ್ಣ ಮನೋರಮೆಯರ ಸರಸ ಸಲ್ಲಾಪದಂತೆ ಎಂದೆನ್ನುತ್ತಾರೆ ಶ್ರೀಮತಿ ಚೊಂದಮ್ಮನವರು.

"ಕಳೆದು ಹೋದರೆ ಮತ್ತೆ ಸಿಗಲಾರದ ವಸ್ತು ಎಂದರೆ ಸಮಯ" ಆದ್ದರಿಂದ ಸಮಯವನ್ನು ಹಾಳು ಮಾಡದೆ ಉಪಯುಕ್ತವಾದ ಕೆಲಸದಲ್ಲಿ ತೊಡಗಿಸಿ ಜೀವನ ಸಾರ್ಥಕ ಪಡಿಸಿಕೊಳ್ಳಿ ಎಂಬುದೇ ಯುವ ಜನತೆಗೆ ಗೃಹಿಣಿಯೂ, ಲೇಖಕಿಯೂ ಆದ ಚೊಂದಮ್ಮನವರ ಉವಾಚ.

**ಲೇಖನ : ಪಟ್ಟಡ ಪ್ರಭಾಕರ**

---

## ನನ್ನ ಊರು

ಕಾವೇರಿ ತಾಯಿಯ ತೌರೂರು,
ತಾಲೋಗಿರುವುದು ಬರಿ ಮೂರು
ದಕ್ಷಿಣ ದೇಶದ ಕಾಶ್ಮೀರು,
ಅದುವೇ ನನ್ನಯ ಹುಟ್ಟೂರು.
ಸುತ್ತಲು ನೋಡಲು ಗಿರಿಮೇರು,
ಅನುಗಾಲವು ಹೊಸ ಹಸುರಿನ ಪೈರು
ಕಾಫಿ, ಕಿತ್ತಳೆ, ಏಲಕ್ಕಿ ತೌರು
ಅದುವೇ ನನ್ನಯ ಹುಟ್ಟೂರು
ಲಿಂಗ ವೀರರು ಕಟ್ಟಿದ ಊರು
ಆಂಗ್ಲರು ಬೀಡು ಬಿಟ್ಟಿದ ಊರು
ತಿಮ್ಮಯ್ಯ, ಕಾರ್ಯಪ್ಪ ಹುಟ್ಟಿದ ಊರು,
ಅದುವೇ ನನ್ನಯ ಹುಟ್ಟೂರು
ಜೇನಿಗೆ ಹೆಸರನು ಪಡೆದಿಹ ಊರು,
ಮಣ್ಣಲಿ ಬರಿ ಶ್ರೀಗಂಧದ ಬೇರು
ಅಂದದ ಚಂದದ ತರುಣಿಯರೂರು
ಅದುವೇ ನನ್ನಯ ಹುಟ್ಟೂರು.
ಪಾಪವ ತೊಳೆಯುವ ಕಾವೇರಿ ನೀರು,
ಮಳೆಗಾಲವು ಇಲ್ಲಿಗೆ ಬಲು ಜೋರು
ಧೀರರ, ಶೂರರ, ಕಲಿಗಳ ಊರು,
ಅದುವೇ ನನ್ನಯ ಹುಟ್ಟೂರು

**ಇಗ್ಗುಡ ಚಿಣ್ಣಪ್ಪ ಸುಬ್ರಮಣಿ, ಪಾರಾಣೆ**

# ರತಿಗೆ ಕೊಲೆ ಸೋಂಕಿದ್

"ಅತ್ತೇ, ಓ ಅತ್ತೆ" ನೆರೆಮನೆ ಶಾಂತಿ ಮನೆ ಮೆಟ್ಟ್ ಹತ್ತಿಕ್ಕಂಡೇ ಜೋರಾಗಿ ಕರ್‌ಕಂಡ್ ಕೈಯಲೆಗೆ ಬಾತ್.

"ಯಾರ್, ಅಕ್ಕನಾ?" ಅತ್ತೆ ಬದ್ಲ್ ಸೊಸೆ ವಿಚಾರ್ಸಿಕಂಡ್ ಒಳಗೆಂದ ಪ್ರತ್ಯಕ್ಷ ಆತ್.

"ಅತ್ತೆ ಇಲ್ಲೆನಾ? ಎಲ್ಲಿಗೆ ಹೋಗ್ಯಳೊ, ರತಿ?" ಶಾಂತಿ ಮಾತಾಡಿ ಕಂಡೇ ಐಮರಕೆ ಹೋಗಿ ಕುದ್ದತ್.

"ಅತ್ತೆ ಇಲ್ಲೆ ಅಕ್ಕಾ, ಬಾಣೆಗೆ ಹೋಗ್ಯಳೊ. ಹೋಗಿ ಸುಮಾರ್ ಹೊತ್ತಾತ್. ಈಗ ಬರುವ ಹೊತ್ತಾತ್" ರತಿ ಸೀರೆಲಿ ಕೈ ವರ್ಸಿಕಂಡ್ ಹೇಳ್‌ತ್.

"ಬಾಣೆಗೆ ಹೋಗ್ಯಳೊನಾ? ನೀವೆಲ್ಲ ಇದ್ದ್ ಕಂಡ್ ಅತ್ತೆನ ಬಾಣೆಗೆ ಕಳ್ಸಿದಾ? ಒಳ್ಳೆ ಜನ" ಶಾಂತಿ ಸ್ವಲ್ಪ ಆಕ್ಷೇಪದ ದನಿಲಿ ಹೇಳ್‌ತ್.

"ನೀವು ಎಂಥ ಹೇಳ್ತವಳರಿ ಅಕ್ಕಾ? ನಾವ್ ಕಳ್ಸಕಾ?ಅವಾಗಿ ಹೋಗೊಳೊ. ಕುದ್ದಲ್ಲಿ ಕೂರುದುಲ್ಲೆ. ಕಮ್ಮಿ ಸೊಕ್ಕು ಇಲ್ಲೆ ಬುಡಿ. ಹೋಗಿ ದುಡ್ಡುನ ಮರಕ್ಕೆ ಪ್ರದಕ್ಷಿಣೆ ಹಾಕದಿದ್ದರೆ ಅವುಕೆ ತಿಂದದ್ ಅರ್ಗುದುಲ್ಲೆ" ರತಿ ಜವಾಬು ಕೊಟ್ಟತ್.

ದುಡ್ಡುನ ಮರ ! ತಮಾಷೆ ಮಾಡ್ತವಳಾ, ಹೆಂಗೆ?" ಶಾಂತಿನ ಪ್ರಶ್ನೆ.

"ನಾನ್ಯಾಕೆ ತಮಾಷೆ ಮಾಡ್ಲಿ. ಬಾಣೆ ಪಣ್‌ಪುಳಿ ಮರದ ಬುಡಕ್ಕೆ ಹೋಗಿ ನೋಡಿ. ದಿನಕ್ಕೆ ಮೂರು ಹೊತ್ತು ಆ ಮರಕ್ಕೆ ಸುತ್ತು ಬಂದರೆ ಅವುಕೆ ಸಮಾಧಾನ" ರತಿನ ಉತ್ತರ.

"ಇದೊಳ್ಳೆ ತಮಾಷೆ ಆತಲೆ, ರತಿ. ಹಿಂದೆನ ಕಾಲದ ಅಜ್ಜಿಕ ಆಲದ ಮರಕ್ಕೆ ಸುತ್ತು ಹಾಕ್‌ತಿದ್ದೊ. ಈಗ ಪುಣ್‌ಪುಳಿ ಮರಕ್ಕೆ ಸುತ್ತು ಬಂದವೆಲ್ಲಾ!"

"ನೀವು ಹೇಳ್ದ್ ಸರಿ ಅಕ್ಕಾ. ಕಾಲಕ್ಕೆ ತಕ್ಕ ಕೋಲ ಅಂತ ಗಾದೆ ಉಟ್ಟಲ್ಲೆ"

"ಹಂಗಾರೆ ಅವು ತುಂಬಾ ತೊಪ್ಪೆ ಮಾಡಿರೊಕು ಕಂಡದೆ. ಇರ್ಲಿ ಬುಡು. ಅವರ ಎಲಾಡಿಕೆ ಖರ್ಚಿಗೆ ಆದೆ"

ರತಿ ಏನೋ ಗ್ಯಾನ ಮಾಡಿಕಂಡ್, "ಈಗ ಬಂದೆ ಅಕ್ಕಾ, ಕಾಫಿ ತನ್ನೆ. ಕುದ್ದ್‌ರಿ" ಅತ ಹೇಳಿ ಕಂಡ್ ಒಳಗೆ ನುಗ್ಗಿತ್.

"ನಂಗೆ ಏನೂ ಬೇಡ, ರತಿ. ಈಗ ಕುಡ್‌ದ್ ಬಂದದ್. ಅತ್ತೆನ ಮಾತಾಡ್ಸಿಕಂಡ್ ಪೋಯಿಂತ ಬಂದೆ" ಹಂಗೆ ಹೇಳ್ತಾ ಶಾಂತಿ ರತಿನ ಹಿಂದೆ ಒಳಗೆ ನುಗ್ಗಿತ್.

"ಕುದ್ದ್‌ರಿ, ಅಕ್ಕಾ, ಅಲ್ಲಿ ಮಣೆಉಟ್ಟು, ನೋಡಿ" ಒಲೆ ಮುಂದೆನ ಮಣೆನ ಶಾಂತಿಗೆ ತೋರ್ಸಿತ್ ರತಿ.

ರತಿ ಕಾಫಿ ಬಿಸಿ ಆಕೆ ಮೊಡ್‌ಗಿ ನಿತ್ತಲ್ಲೇ ನೆಗಾಡ್‌ತಿತ್ತ್.

" ಯಾಕೆ ರತಿ ನೆಗಾಡ್ತಾವಳಾ?" ಅವಳ ನೆಗೆ ನೋಡಿ ಶಾಂತಿ ಕೇಳ್‌ತ್.

"ಮೊನ್ನೆ ಒಂದ್ ತಮಾಷ ಆತ್. ಅದ್ ಗ್ಯಾನಾಗಿ ನೆಗೆ ಬಾತ್"

"ಎಂಥರಾ ಅದ್, ಅಂಥಾ ತಮಾಷ!"

ರತಿ ಕತೆ ಸುರು ಮಾಡ್‌ತ್ "ಆಚೆ ಮನೆವು ವಳಲ್ಲೆ, ಸುಟ್ಟೆ ಒಂದಿನ ಅವು ಬೊಳಿ ಬುಡಿಕೆ ಮುಂದೆ ಹೋಗಿ ಪಣ್‌ಪುಳಿ ಹೆರ್‌ಕ ನಾನ್ ಹೋಗಿ ಖಾಲಿ ಪಚ್ಚೆ ತರಂಗೆ ಆತ್. ಅವುಕೆ ಕಲ್ಸಕುಂತ ಗ ಮಾಡಿಕಂಡ್ ಮಲ್ಗಿದೆ. ಎಚ್ಚರ ಆದೇ ತಡ, ಪಚ್ಚೆ ತಕಂಡ್ ಹಿಂ ಬಾಗ್ಲಿಂದ ಚೂರೂ ಸದ್ದಾಗದಂಗೆ ಹೋದೆ. ತಿಂಗೊಳು ಇತ್ತ್. ನಾ ಕುಳ್ಳೋಟು ಓಡ್‌ತಾ ಹೋಗಿ ಪಚ್ಚೆ ತುಂಬ್ಸಿ ಕಂಡ್ ಮನೆಗೆ ಬಂ ಬಂದಂಗೆ ಪಚ್ಚೆನ ಒಂದ್ ಕಡೆ ಕುಕ್ಕಿ ಬಾಡೆಗೆ ಬಾಕನ ಗಂಟೆ ಎರ್ ಹೊಡಿಯತಾ! ನಂಗೆ ಮೈಯೆಲ್ಲಾ ಅಕ್ಕಿ ಒಡಿಯಕೆ ಶುರಾ ಇಷ್ಟೊತ್ತಿಗೆ ನಮ್ಮ ಸುಡ್ಕುಳಿ ಕರೆಗಾಗಿ ಹೋಗಿ ಬಂದೆಲ್ಲಾ ಮನ್‌ಸ್‌ಲ್ಲೆ ಒಂಥರಾ ಅಳ್‌ಕ್ ಆತ್. ಮಲ್ಗಿರೆ ಮತ್ತೆಲ್ಲಿ ನಿದ್ದೆ ಹಂಗೂ ಹಿಂಗೂ ಬೆಳಿಗೆ ಮಾಡ್‌ದೆ. ಇನ್ನ್ ಮುಂದಕೆ ಇಂಥ ಹು ಕಾರ್‌ಬಾರಕ್ಕೆ ಕೈ ಹಾಕುದುಲ್ಲೆಂತ ತೀರ್ಮಾನ ಮಾಡ್‌ದೆ".

"ಅಬ್ಬಾ! ದೇವ್ರು ದೊಡ್ಡಂವ, ರತಿ. ಏನಾರ್ ಹೆಚ್ಚಿ ಕವಿ ಆಗಿದ್ದರೆ!", ರತಿನ ಕತೆ ಕೇಳಿ ಶಾಂತಿ ದೊಡ್ಡ ಗಂಡಾಂತರ ಪಾರಾದಂಗೆ ಹೇಳ್‌ತ್. ಅಷ್ಟೊತ್ತಿಗೆ ಅತ್ತೆ ಪಣ್‌ಪುಳಿ ತಕಂ ಬಂದೊ.

"ಓ..... ಅತ್ತೇ...... ಏನಾರ್ ಆಗಲಿ, ನಿಮ್ಮ ಖರ್ಚಿಗೆ ದಾ ಆತ್," ಶಾಂತಿ ಅತ್ತೆನ ಕಂಡ ಖುಷಿಲಿ ಹೇಳ್‌ತ್.

ಅತ್ತೆಗೆ ಉಸುರು ಕಟ್ಟಿದಂಗೆ ಆಗ್‌ತಿತ್ತ್. ಮಾತಾಡದೆ ಒ ಹತ್ರ ಹೋಗಿ ಕುದ್ದೊ.

ಶಾಂತಿಗೂ, ಅತ್ತೆಗೂ ಕಾಫಿ ಕೊಟ್ಟು ರತಿ ಪಣ್‌ಪುಳಿ ಕೊಯ್ಯ ಕುದ್ದತ್. ಅತ್ತೆಗೆ ಉಸುರು ಬಂದಂಗೆ ಆತ್. ಶಾಂತಿನ ನೋಡಿ "ಶಾಂ ಹೆಂಗೊಳವ್ವ? ಮನೆಲಿ ಎಲ್ಲಾ ಉಷಾರೊಳೊ?" ಅಂತ ಕೇಳ್‌ದೊ

"ಎಲ್ಲಾ ಉಷಾರೊಳೊ, ಅತ್ತೆ. ಹಟ್ಟಿ ಕಡೆ ಬಂದವುಳು ನಿಮ ನೋಡಿಕಂಡ್ ಪೋಯಿಂತ ಬಂದೆ"

"ಶಾಂತಿ, ಒಮ್ಮೊಮ್ಮೆ ಗ್ಯಾನ ಮಾಡ್ರೆ ಪಣ್‌ಪುಳಿನೂ ಬೇಡ ಏನೂ ಬ್ಯಾಡಾಂತ ಆದೆ, ಅವ್ವ. ಆದ್ರೆ ಎಷ್ಟ್‌ತ ಸುಮ್ಮನೆ ಕುದ್ದ್‌ರಕ್ ಹಟ್ಟಿಕಡೆ, ಬಾಣೆಕಡೆ ಕಾಲಾಡಿಕಂಡ್ ಬಂದರೆ ಕೈಕಾಲ್ ಸ್ವಲ್ಪ ಸಡ ಆದೆಂತ ಹೊರ್‌ಟನೆ. ಮೊನ್ನೆ ಪಣ್‌ಪುಳಿ ದೆಸೆಂದ ಏನಾತ್ ಗೊತ್ತಾ?

" ಆ ಕತೆನ ಅವುಕೆ ಹೇಳಿ ಆತ್, ಅತ್ತೆ" ರತಿ ಪಣ್ ಪು ಕೊಯ್ಯುದರ ಬುಟ್ಟ್ ನೆಟ್ಟನೆ ಕುದ್ದ್ ಹೇಳ್‌ತ್.

"ಅಂದ್ ಹಂಗಾತಲ್ಲೆ, ಅಕ್ಕಾ ಮಾರನೆ ರಾತ್ರಿ ಮಲ್ಗಿದವುಳಿ ಸುಡುಕುಳಿಲಿ ಬೆಳ್ಳಂಗೆ ಯಾರ್‍ಯಾರೋ ಕೋಣೆಯಂಗೆ ಕಾಂಬದುಂತ ಹೆದ್ರಿಕೆಲಿ ನಾನ್ ನರ್‌ಕ್‌ತಿದ್ದೆ ಗಡ. ಆಗ ಇವು ಎದ್ದ್ ಬಂದ್ ಸ್ವಲ್ಪ ಅಕ್ಕಿನ ಓಡ್ಕಂಡ್ ನನ್ನ ತಲೆ ಸುತ್ತ ತಂದ್, ಕೊಲೆ, ಪೀಡೆ, ಪಿಶಾಚಿ ದೆವ್ವ, ಯಾರೇ ಆಗಿದ್ದರೂ ಇವುಳಿಗೆ ಉಪದ್ರ ಕೊಡಿಗೆ ಬೊತ್ತು. ಈ ಅಕ್ಕಿನ ಓಡ್‌ದ್ ಹೊರ್‌ಟ್ ಹೋಕುಂತ' ಹೇಳಿ ಅಂಗಳಕ್ಕೆ ಬಿಸಾಕಿ ಬಂದ್ ಮಲ್ಗಿದೊ. ಆಮೇಲೆ ನಾನ್ ಸರಿಯಾಗಿ ನಿದ್ದೆ ಮಾಡ್‌ದೆ."

"ಈಗ ರಾತ್ರಿ ಹೋದುಲ್ಲೆನಾ?" ಶಾಂತಿ ಹೋಕೆ ಏಳ್ ಕೇಳಿತ್

"ಅಯ್ಯೋ, ದಮ್ಮಯ್ಯಾ, ಆ ಸುದ್ದಿ ಮಾತಾಡ್ ಬೇಡಿ ಆಚೆಮನೆಯವರ ಹೊಡ್ತ್."

ಕುಲ್ಲಚನ ಕಾರ್ಯಪ್ಪ, ಕುಂಬಳದಾಳು ಗ್ರಾಮ

# ಯುದ್ಧದ ಕಹಿ ಅನುಭವ



ಶ್ರೀ ಕಡ್ಲೇರ ಚಿಣ್ಣಪ್ಪ

ದಿನಾ ಬೆಳಗ್ಗೆ ಪತ್ರಿಕೆ ನೋಡಿದರೆ ಮೊದಲ ಪುಟದಲ್ಲಿ ದೊಡ್ಡ ...ರಗಳಲ್ಲಿ ಕಾರ್ಗಿಲ್ ಯುದ್ಧದ ಸುದ್ದಿ. ಈ ಯುದ್ಧದ ಭಯಂಕರತೆಯನ್ನು ...ನುಭವಿಸಿದವರಿಗೆ ಗೊತ್ತು. ಇಂತಹ ಒಂದು ಯುದ್ಧದ ಅನುಭವ ...ಣ್ಣಪ್ಪನವರದು. ಮಡಿಕೇರಿಯ ಬೆಟ್ಟಗೇರಿ ಕಡ್ಲೇರ ದೇವಯ್ಯ ಹಾಗೂ ...ೀಜಮ್ಮನವರ ಐದು ಗಂಡುಮಕ್ಕಳಲ್ಲಿ ಹಿರಿಯವರಾಗಿ ಹುಟ್ಟಿದ ಶ್ರೀ ಕಡ್ಲೇರ ...ಣ್ಣಪ್ಪನವರು ಚಿಕ್ಕಂದಿನಲ್ಲಿಯೇ ಸೈನ್ಯಕ್ಕೆ ಸೇರಬೇಕೆಂಬ ಬಯಕೆ. ಅದರಂತೆ ...ಟ್ಟಗೇರಿ ಶಾಲೆಯಲ್ಲಿ ಓದುತ್ತಿರುವಾಗಲೇ ಬಹಳ ಹುಮ್ಮಸ್ಸಿನಿಂದ ಸೈನ್ಯಕ್ಕೆ ...ರಿಯೇ ಬಿಟ್ಟರು. ಇದು ನಡೆದದ್ದು 1957ರಲ್ಲಿ. ಊಟಿಯಾ ವೆಲ್ಲಿಂಗ್ಟನ್‌ನ ...ಂ.ಆರ್.ಸಿ. ಟ್ರೈನಿಂಗ್ ಸೆಂಟರ್‌ನಲ್ಲಿ ತರಬೇತಿ ಪಡೆದರು. ನಂತರ ...ಂಜಾಬ್‌ನ ಅಂಬಾಲ, ಅಸ್ಸಾಂ ನಂತರ ನೇಪಾಳದ ಗಡಿ ಪ್ರದೇಶಕ್ಕೆ. ಆಗ ...ಂದರೆ 1962ರಲ್ಲಿ ಈಗಿನ ಪಾಕಿಸ್ತಾನದಂತೆ ಚೀನಾ ದೇಶದವರ ಹದ್ದಿನ ...ಣ್ಣು ನಮ್ಮ ದೇಶದ ಮೇಲೆ. ದೇಶದ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತ ...ಮಾರು 3,000-3,500 ಸೈನಿಕರನ್ನು ಹೆಲಿಕಾಪ್ಟರ್‌ಗಳ ಮೂಲಕ ಮಚ್ಚೂಕ ...ಂಬ ಗಡಿ ಪ್ರದೇಶಕ್ಕೆ ಕರೆದೊಯ್ಯಲಾಯಿತು. ಇವರಲ್ಲಿ ಚಿಣ್ಣಪ್ಪನವರು ...ಬ್ಬರು. ಮಚ್ಚೂಕ ಎಂಬ ಪ್ರದೇಶವು ಹಿಮಾಲಯದ ಹತ್ತಿರ ಇದೆ. ...ಯಾವಾಗಲೂ ಹಿಮದಿಂದ ಕೂಡಿರುತ್ತದೆ. ಸುಮಾರು ಒಂದು ತಿಂಗಳ ನಂತರ ...ಾರತ ಚೀನಾ ಯುದ್ಧ ಪ್ರಾರಂಭವಾಗುತ್ತದೆ. ಚಿಣ್ಣಪ್ಪ ಹಾಗೂ ಸಹ ಸೈನಿಕರ ...ಂದೂಕದ ಗುರಿಗೆ ಹಲವಾರು ಶತ್ರುಗಳು ಬಲಿಯಾದರು. ಆಗ ಚಿಣ್ಣಪ್ಪನವರ ...ಟಾಲಿಯನ್‌ನಲ್ಲಿ ಆಹಾರದ ಕೊರತೆ ಇತ್ತು. ಇವರು ತೆಗೆದುಕೊಂಡು ...ೋಗಿದ್ದ ಆಹಾರ ಖಾಲಿಯಾಗಿತ್ತು. ಆದರೂ ಸ್ಥೈರ್ಯ ಗೆಡದೆ ...ೋರಾಟವನ್ನು ನಡೆಸುತ್ತಿದ್ದರು. ತಾಯಿ ನಾಡಿನ ರಕ್ಷಣೆಯೇ ಗುರಿಯಾಗಿತ್ತು. ...ತ್ರುಗಳ ವಿರುದ್ಧ ಹೋರಾಡಲು ಕಡಿದಾದ ಹಾಗೂ ಹಿಮದಿಂದ ಕೂಡಿದ ...ಟ್ಟವನ್ನು ಏರಬೇಕಾಗಿತ್ತು.

ಆಹಾರದ ಸರಬರಾಜನ್ನು ಹೆಲಿಕಾಪ್ಟರ್ ಮೂಲಕ ನಮ್ಮ ಯೋಧರಿಗೆ ಮಾಡುವಾಗ ಶತ್ರು ಸೈನಿಕರು ನಮ್ಮ ದೇಶದ ಧ್ವಜವನ್ನು ತೋರಿಸಿ ಆಹಾರವನ್ನು ...ಬಳಿಸುತ್ತಿದ್ದರಂತೆ. ಒಂದು ವೇಳೆ ನಮ್ಮ ಸೈನಿಕರು ಹೋದರೆ ಗುಂಡಿನ ...ರಿಮಳೆಗೈಯುತ್ತಿದ್ದರು.

ಯುದ್ಧದ ಸಮಯದಲ್ಲಿ ಸೈನಿಕರನ್ನು ಗುಂಪುಗಳಾಗಿ ವಿಂಗಡಿಸಲಾಗಿತ್ತು. ...ಚಿಣ್ಣಪ್ಪನವರ ಗುಂಪಿನಲ್ಲಿ ಹತ್ತು ಜನರು ಇದ್ದರು. ಇವರ ಗುಂಪಿನಲ್ಲಿದ್ದ ಒಬ್ಬ ಡಾಕ್ಟರ್ ಹಸಿವಿನಿಂದ ಕಂಗಾಲಾಗಿದ್ದ ಇವರಿಗೆ ಒಂದು ಮರದ ಎಲೆಯನ್ನು ಪರೀಕ್ಷಿಸಿ, ಇದನ್ನು ತಿನ್ನಬಹುದು ಎಂದರು. ಮೊದಲೇ ಹಸಿವಿನಿಂದ ಕೂಡಿದ್ದ ಯೋಧರು ಗಬಗಬನೆ ಎಲೆಗಳನ್ನು ತಿಂದರು. ಮರುದಿನ ನೋಡಿದರೆ ಆ ಮರದಲ್ಲಿ ಒಂದು ಎಲೆಯು ಕೂಡ ಇರಲಿಲ್ಲವಂತೆ.

ಹೀಗೆ ಚಿಣ್ಣಪ್ಪನವರ ಗುಂಪಿನವರು ಶತ್ರು ಪಾಳೆಯದತ್ತ ಹಿಮದ ಬೆಟ್ಟವನ್ನು ಏರುತ್ತಿರುವಾಗ ಏಳು ಜನರು ಹಿಮದಲ್ಲಿಯೇ ಮುಚ್ಚಿ ಹೋದರಂತೆ. ಇನ್ನೂ ಮೂರು ಜನ ಉಳಿದವರಲ್ಲಿ ಚಿಣ್ಣಪ್ಪನವರು ಒಬ್ಬರು. ಒಂದು ಬಂಡೆಯ ಕೆಳಗೆ ಮಲಗಿ ಹಿಮದಿಂದ ಪಾರಾಗಿ ಬಂದ ದಾರಿಯಲ್ಲಿಯೇ ವಾಪಾಸ್ಸಾಗುವಾಗ ಶತ್ರು ದೇಶದವರ ಹಾಗೂ ನಮ್ಮ ದೇಶದ ಸೈನಿಕರ ಮೃತದೇಹಗಳನ್ನು ಕಾಡುಪ್ರಾಣಿಗಳು, ಹದ್ದು ಕಾಗೆಗಳು ಕುಕ್ಕಿ ತಿನ್ನುವ ದೃಶ್ಯಗಳು.

ಹೀಗೆ ಮುಂದೆ ಬರುತ್ತಿರುವಾಗ ನೇಪಾಳದಿಂದ ಯುದ್ಧದಿಂದಾಗಿ ವಲಸೆ ಹೋಗುತ್ತಿದ್ದ ಒಬ್ಬರಿಂದ ಚಿಣ್ಣಪ್ಪನವರು ತಮ್ಮ ಬೆರಳಿನಲ್ಲಿದ್ದ ಚಿನ್ನದ ಉಂಗುರವನ್ನು ಕೊಟ್ಟು, ಅದರಿಂದ ಒಂದು ಕೆ. ಜಿ. ಅಕ್ಕಿಯನ್ನು ಪಡೆದು ಅದೇ ಅಕ್ಕಿಯನ್ನು ಹಾಗೆಯೇ ಈ ಮೂವರು ತಿಂದರಂತೆ. ಆಗ ಇವರಿಗೆ ಅನ್ನ ನೀರು ಇಲ್ಲದೆ ಐದಾರು ದಿವಸಗಳಾಗಿತ್ತಂತೆ. ಹಾಗೆಯೇ ಮುಂದೆ ಬರುತ್ತಿರುವಾಗ ಚೀನಾದ ಸೈನಿಕರ ಕೈಗೆ ಸೆರೆ ಸಿಕ್ಕಿದರು. ಇವರುಗಳನ್ನು ಚೀನಾದ ಸೆರೆಮನೆ ಗೊಯ್ಯಲಾಯಿತು. ಹಿಮದಿಂದ ಕೂಡಿದ ಆ ಯುದ್ಧಭೂಮಿಯಲ್ಲಿ ಕಾಲಿಗೆ ಹಾಕಿದ್ದ ಬೂಟುಗಳನ್ನು ಬಿಚ್ಚಲಾಗುತ್ತಿರಲಿಲ್ಲ. ಇದರಿಂದ ಕಾಲುಗಳೆಲ್ಲಾ ಊದಿಕೊಂಡು ನಡೆದಾಡಲು ಕಷ್ಟವಾಗುತ್ತಿತ್ತು. ಚೀನಾದವರು ಭಾರತದ ಸೈನಿಕರ ಬೂಟುಗಳನ್ನು ಕತ್ತರಿಸಿ ಕಾಲುಗಳನ್ನು ಹೊರತೆಗೆಯಲಾಯಿತು. ಆಗ ಚಿಣ್ಣಪ್ಪನವರ ಕಾಲುಗಳು ಕೊಳೆತಂತಾಗಿತ್ತು. ಅಸಾಧಾರಣ ನೋವಿನಿಂದ ಕೂಡಿದ್ದ ಇವರು ಪಟ್ಟ ಯಾತನೆ ಅಷ್ಟಿಷ್ಟಲ್ಲ. ಸೆರೆಸಿಕ್ಕ ಭಾರತೀಯ ಸೈನಿಕರ ಸ್ಥಿತಿ ಇದೇ ಆಗಿತ್ತು. ಸೆರೆಮನೆಯಲ್ಲಿ ಮಲಗಿದಲ್ಲಿಯೇ ಇದ್ದರು. ಅಲ್ಲಿ ಇವರಿಗೆ ಕೊಡುತ್ತಿದ್ದ ಆಹಾರವೆಂದರೆ ಎರಡು ಹೊತ್ತು ಉಪ್ಪು ಹಾಕಿದ ಗಂಜಿ ಹಾಗೂ ಒಂದು ಕಪ್ಪು ಉಪ್ಪಿನ ಟೀ. ಈ ರೀತಿಯ ಶಿಕ್ಷೆಯನ್ನು ಮೂರು ತಿಂಗಳ ಕಾಲ ಅನುಭವಿಸಿದರು. ನಂತರ ಉಭಯದೇಶಗಳ ನಡುವೆ ಮಾತುಕತೆ ನಡೆದು ಇವರುಗಳನ್ನು ಬಿಡುಗಡೆ ಮಾಡಲಾಯಿತು. ಇವರನ್ನು ವಿಮಾನದ ಮೂಲಕ ದೆಹಲಿಗೆ ಕರೆದುಕೊಂಡು ಬರಲಾಯಿತು. ಭಾರತೀಯ ಸೈನಿಕರಿಗೆಲ್ಲಾ ದೆಹಲಿಯ ವಿಮಾನ ನಿಲ್ದಾಣದಲ್ಲಿ ಭವ್ಯ ಸ್ವಾಗತ ದೊರೆಯಿತು. ಒಂಭತ್ತು ತಿಂಗಳುಗಳ ಕಾಲ ದೆಹಲಿಯ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದರು. ಆವಾಗ ಚಿಣ್ಣಪ್ಪನವರ ಎರಡು ಕಾಲಿನ ಬೆರಳುಗಳು ಸಂಪೂರ್ಣವಾಗಿ ಕೊಳೆತ ಕಾರಣ ಕತ್ತರಿಸಿ ತೆಗೆಯಲಾಯಿತು.

ನಂತರ ತಮ್ಮ ಊರಿಗೆ ವಾಪಸ್ಸಾದ ಇವರು ಅರಂಬೂರು ಶಿವಣ್ಣನವರ ಪುತ್ರಿ ನೀಲಾವತಿಯವರನ್ನು ವಿವಾಹವಾದರು. ಮೂರು ಗಂಡು ಮಕ್ಕಳ ತಂದೆಯಾದ ಇವರನ್ನು ಮುಂಬಯಿಯಲ್ಲಿ ಲಿಫ್ಟರ್ ಆಗಿ ಕೆಲಸ ನಿರ್ವಹಿಸುವಂತೆ ಸರಕಾರ ಆಹ್ವಾನಿಸಿತು.

ಹಾಗೆಯೇ ಮುಂಬಯಿಯಲ್ಲಿ ವೃತ್ತಿ ನಿರ್ವಹಿಸುತ್ತಿರುವಾಗ ಅಂದರೆ 1971ರಲ್ಲಿ ಭಾರತ ಪಾಕಿಸ್ತಾನ ಯುದ್ಧ ಪ್ರಾರಂಭವಾಯಿತು. ಆಗ ಇವರು ಯುದ್ಧಭೂಮಿಗೆ ಹೋಗದಿದ್ದರೂ ಯುದ್ಧದ ಕಹಿ ಅನುಭವವನ್ನು ಪಡೆದರು. ನಂತರ ಸ್ವಯಂ ನಿವೃತ್ತಿಯನ್ನು ಪಡೆದು ಬೆಂಗಳೂರಿನ ಎಚ್.ಎ.ಎಲ್. ಕಾರ್ಖಾನೆಯಲ್ಲಿ ಸೆಕ್ಯೂರಿಟಿ ಸೂಪರ್‌ವೈಸರ್ ಆಗಿ ದುಡಿದು ಈಗ ನಿವೃತ್ತಿಯಾಗಿರುತ್ತಾರೆ.

ಕಾರ್ಗಿಲ್ ಯುದ್ಧದ ಭೀಕರತೆಯನ್ನು ಪತ್ರಿಕೆಗಳಲ್ಲಿ ಓದಿ, ಅವರಲ್ಲಿ ಯುದ್ಧದ ಬಗ್ಗೆ ಕೇಳಿದಾಗ ಇವರ ಬಾಯಿಂದ ಬಂದ ಯುದ್ಧದ ಅನುಭವಗಳು ಇವು. ಈಗ ವಿಶ್ರಾಂತಿಯ ಜೀವನವನ್ನು ತಮ್ಮ ಪತ್ನಿ, ಮಕ್ಕಳು, ಮೊಮ್ಮಕ್ಕಳೊಂದಿಗೆ ನಡೆಸುತ್ತಿದ್ದಾರೆ.

**ಲೇಖನ : ಕಡ್ಲೇರ ಸುಕನ್ಯ ಯಶೋಧಕುಮಾರ್**

**ವರದಿ : ಕಲ್ಲುಮುಟ್ಲು ಬಸಪ್ಪ**

# ಗೌಡರು ಯಾರು : ಎಲ್ಲಿಂದ? ಎಲ್ಲಿಗೆ?

## ೧. ಗೌಡ ಯಾರು?

ಹಿಂದೂ ದೇಶಕ್ಕೆ 'ದ್ರಾವಿಡರು' ಹೊರಗಿನಿಂದ ಬಂದವರೆಂದು ಯುರೋಪಿಯನ್ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಎಲ್ಲಿಂದ ಬಂದರು ಎಂಬ ಬಗ್ಗೆ ಇನ್ನೂ ಐಕ್ಯಮತವಿಲ್ಲ. ಹಾಗಿದ್ದರೂ ಕಳೆದ ಕೆಲವು ವರ್ಷಗಳಿಂದ ದ್ರಾವಿಡ ಜನಾಂಗಕ್ಕೂ ಭೂಮಧ್ಯ ಪ್ರದೇಶ ಸಮುದ್ರದ ನೆರೆಯ ಜನಾಂಗಕ್ಕೂ ಬಹಳ ಸಾಮ್ಯವಿದೆ ಎಂದೂ, ಅತ್ತ ಕಡೆಯಿಂದ ಹಿಂದೂ ದೇಶಕ್ಕೆ ಬಂದ ಒಂದು ಶಾಖೆಯವರೆಂದು ಅನೇಕ ವಿದ್ವಾಂಸರು ಪ್ರತಿಪಾದಿಸುತ್ತಾರೆ. ಯುರೋಪಿನ ಸಂಶೋಧಕರು ಹೇಳುವ ದ್ರಾವಿಡ ಜನಾಂಗದವರಲ್ಲಿ ಹಟ್ಟಿ ವಂಶವೂ ಒಂದು. ಹಟ್ಟಿಕಾರ ಪಂಗಡಕ್ಕೆ ವೆಳ್ಳರು, ನಂದಿಧ್ವಜರು, ಮೂಲ ಮತಸ್ಥರು. ವೆಳ್ಳರಿಂದ ತಮಿಳು ವೆಳ್ಳರಲ್ಲಿ ಕೆಲವರು ತೆಲಗರಲ್ಲಿ ಸೇರಿ ವೆಳಂರಾದರು. ನಂದಿಧ್ವಜರಲ್ಲಿ ಕುರು(ಂ)ವರು ಮತ್ತು ತುರುವರು, ಕುಡುವರು - ತುರುವ ವೃಕ್ಷಕ್ಕೆ ಸೇರಿದವರಲ್ಲಿ ಗೌಳ (ಗೌಡರು) ಎಂಬುದಾಗಿ ವಿಂಗಡಿಸಿದ್ದಾರೆ. ತುರುವರಿಗೆ ಋಗ್ವೇದದಲ್ಲಿ 'ತುರ್ವ' ರೆಂದು ಒಂದೆಡೆ ಹೇಳಿದೆ ಎಂದು ಬಲ್ಲವರು ಹೇಳುತ್ತಾರೆ. ಈ ತುರ್ವರು ಅಥವಾ ತುರ್ವಶರು ಪುರಣಗಳಲ್ಲಿ ತರ್ವಸುಗಳೆಂದು ವರ್ಣಿಸಿದ್ದಾರೆಂದು ಹೇಳುತ್ತಾರೆ. 'ವಸು' ಎಂದರೆ ಧನ. ಹಾಗದರೆ 'ತರ್ವಿನ' ವಸು ಎಂದರೆ ಧನವುಳ್ಳ ಜನಾಂಗದವರೆಂದು ಅರ್ಥ.

ಯದು - ತರ್ವಕರು ಹಿಂದೂ ದೇಶಕ್ಕೆ ಬಹಳ ದೂರದಿಂದ ಸಮುದ್ರ ಮಾರ್ಗವಾಗಿ ಬಂದರೆಂದು ಶ್ರೀ ರಾಮಪ್ರಸಾದ ಚಂದಾರವರು ತಮ್ಮ ಗ್ರಂಥದಲ್ಲಿ ಪ್ರತಿಪಾದಿಸುತ್ತಾರೆ. ಅವರು ಮೊದಲು ಸಿಂಧೂ ತೀರವನ್ನು ನೆಲೆವೀಡಾಗಿ ಮಾಡಿ ವೇದಗಳ ಕಾಲಕ್ಕಿಂತ ಮೊದಲೇ ಸರಿದು ಮಹಾಭಾರತ ಕಾಲಕ್ಕೆ ಗಂಗಾ ಯಮುನಾ ನಾಡಿಗೆ ಬಂದರೆನ್ನುತ್ತಾರೆ. ಇನ್ನೊಂದು ಶಾಖೆಯು ಸೌರಾಷ್ಟ್ರಕ್ಕೂ ಹೋಗಿರಬೇಕು. ಅಲ್ಲಿಂದ ಪಶ್ಚಿಮ ಕರಾವಳಿಯ ಕಡೆಗೆ ಬಂದು ಅಲ್ಲಿಂದ ಈಗಿನ ಮಹಾರಾಷ್ಟ್ರ ಬೆಳಗಾಂ, ಉತ್ತರಕನ್ನಡ, ದಕ್ಷಿಣ ಕನ್ನಡ, ಧಾರವಾಡ, ಬಳ್ಳಾರಿ ಜಿಲ್ಲೆಗಳಲ್ಲಿ ನೆಲಸಿರಬೇಕೆಂಬ ಊಹನೆಗಳಿವೆ. ತುರ್ವಶರು ದಕ್ಷಿಣಕ್ಕೆ ಸೇರಿದವರೆಂದು ಪುರಾಣಗಳು ಹೇಳುತ್ತವೆ. ಗಂಗಾತೀರದಿಂದ ಬಂದ ಹಟ್ಟಿಕಾರರೇ ಗಂಗಾರಾಗಿರಬೇಕು. ಇವರೇ ಗಂಗಡಿಕಾರರ ಮೂಲಪುರುಷರು. ಗಂಗರಂತೆ ಕಾಪುರೆಡ್ಡಿಗಳು ಚಾಲುಕ್ಯರ ಮೂಲ ಪುರುಷರು, ಅಗಸ್ತ್ಯ ಋಷಿಯು ಮದುವೆಯಾದ ಲೋಪಮುದ್ರೆಯು ವಿದರ್ಭ (ಹಟ್ಟಿಕಾರರ) ನಾಡಿನವಳಂತೆ.

ಈ ಹಟ್ಟಿಕಾರರಲ್ಲಿ ಒಂದು ಶಾಖೆಯವರು ಗೋವಳರಾಗಿ "ಗೋ" (ಪೃಥ್ವಿ) ಪಾಲಕರೆಂದು ಹೇಳುತ್ತಾರೆ. ದನಗಾರಿಕೆ ಯುಗದಲ್ಲಿ "ಗೋ"ವನ್ನು ಭೂಪನಾದನು. ಅಲ್ಲಿಂದ ವಸ್ತ್ರಯುಗವು ಪ್ರಾರಂಭವಾಗಿ ಪಾಡ, ಚೇರ, ಚೋಳ, ಚಾಲುಕ್ಯರಾದರೆಂದು ಹೇಳುತ್ತಾರೆ. ಕಾಲ ಕ್ರಮೇಣದಲ್ಲಿ ಒಕ್ಕಲುತನದ ವ್ಯಾಪಾರೋದ್ಯಮಗಳಿಂದ ಧನದ ಅಭಿವೃದ್ಧಿ ಎಂಬುದನ್ನು ಮರೆತು ರಾಜರಲ್ಲಿ ಬಾಹುಬಲದಿಂದ ಧನ ಸಂಪಾದನೆ ಮಾಡುವ ರೂಢಿಯು ತಲೆದೋರಿತು. ಗೋಪರು (ಗೌಡರೂ) ಪಟ್ಟಿಕಾರರೂ ಭುಜಬಲಶಾಲಿಗಳಾದ ಕ್ಷತ್ರಿಯರಾದ ರಾಜನ್ಯರಿಗೆ ಕ್ಷತ್ರಿಯರೆಂಬ ಹೆಸರು ಮುಂದೆ ಬಂತು. ರಾಷ್ಟ್ರಕೂ ಚಿನ್ನವು ನೇಗಿಲು ಎಂಬುದಾಗಿ ರಾವ್‌ಬಹದೂರ್ ಹನವ ರಾಯರು ಕಂಡು ಹಿಡಿದಿದ್ದಾರೆ. ರಾಷ್ಟ್ರಕೂಟರು ನಮ್ಮ ನಾಡಗೌಡರ ಪಾಟೀಲರೆಂದೂ ಹೇಳುತ್ತಾರೆ. ಪಟ್ಟಿಲ ಎಂದರೆ ಹಟ್ಟಿಕಾರ ಗೋವಳರು, ಗೌಡರು. ಆದುದರಿಂದ ಪಾಟೀಲರೆಂದರೂ ಗೌಳ, ಗೌಡ

ಪ್ರೊ. ಪಿ. ಗುರುರಾಜ ಭಟ್ಟರ ತರ್ಕದಂತೆ ದಕ್ಷಿಣ ಕ ಜಿಲ್ಲೆಯು "ತುಳುನಾಡು" ಎಂಬ ಹೆಸರು ಬರುವುದಕ್ಕೆ ತುರುಕಾ ನಾಡು, ತುರುಗಳೇ ಪ್ರಧಾನರಾದ ನಾಡು ತುರುನಾಡು. "ತುಳುನಾ ತರುವಿನ ಪರ್ಯಾಯ ಪದದಿಂದ ಬಂತೆಂದು ಊಹಿಸುತ್ತಾರೆ. ತುರುಗಳ ಸಾಕುವವರು, ಅವುಗಳನ್ನು ಹೊಂದಿದವರು ತುರುಕಾರರು (ತುರುವ ಈ ತುರುಕಾರರು (ತುರುವರು) ಅವರೇ ತುಳುವರೆಂದು ಹೆಸ ಪಡೆದರು ಎಂದು ಬರೆಯುತ್ತಾರೆ. ಈ ದನಕಾರರು ಇರುವ ಊ ಹಳ್ಳಿಗೆ "ಪಾಡಿ" ಎಂಬುದಾಗಿ ಕರೆದರೆಂದೂ ಅದೇ ರೀತಿ ದಕ್ಷಿ ಕನ್ನಡ ಜಿಲ್ಲೆಯಲ್ಲಿ ಪಾಡಿ ಎಂಬುದಾಗಿ ಅಂತ್ಯವಾಗುವ ಹಲವಾ ಊರುಗಳು ಇವೆ ಎಂದು ಹೇಳುತ್ತಾರೆ. ಉದಾಹರಣೆಗೆ ಕೆದಂಬಾ ಬೆಳ್ಳಿಪಾಡಿ, ಕಾಸ್ಪಾಡಿ, ಮಡಪ್ಪಾಡಿ, ದೋಲ್ಪಾಡಿ, ಚೊಕ್ಕಾಡಿ, ಅಚ್ಚಲ್ಪಾ ಎಂಬ ಹೆಸರುಗಳು ಹಾಗೆ ಬಂದವೆಂದು ಊಹಿಸಲಾಗಿದೆ. ಗೌಡರ ಈ ರೀತಿಯ ಮನೆತನದ ಹೆಸರು ಈಗಲೂ ಇವೆ.

ಕಲ್ಯಾಣ ಚಾಲುಕ್ಯರ ಶಾಸನಗಳಲ್ಲೊಂದಾದ ಎರಡನೆ ಜಗದೇ ಮಲ್ಲನ ಋಷ್ಯಂಶೃಂಗದ (ಶಿರಕಂಗಿ ಸೌದತ್ತಿ ತಾಲೋಕು) ಬೆಳಗಾ ಜಿಲ್ಲೆ ಕ್ರಿ. ಶ. 1148ರ ಶಾಸನದಲ್ಲಿ ಅಲ್ಲಿಯ ಊರಿನ ಗಾವುಂಡ (ಗೌಡರು) ಭೂದಾನ ಮಾಡಿದ ದಾಖಲೆ ಇದೆ ಎಂದು ಹೇಳುತ್ತಾ ಈ ಗವುಂಡರಲ್ಲಿ (ಗೌಡರಲ್ಲಿ) ಕೆಲವರು ತೊಳಪ ಕುಲ ಸೇರಿದವರೆಂದು ನಮೂದಿಸಲ್ಪಟ್ಟಿದೆ ಎಂದು ಹೇಳುತ್ತಾರೆ. ಕುಲದವರ ಹೆಸರು ವಿಜಯನಗರದ ಶಾಸನಗಳಲ್ಲಿ ಅಲ್ಲಲ್ಲಿ ಪಶ್ಚಿ ಕರಾವಳಿಯ ಉತ್ತರ ಮತ್ತು ದಕ್ಷಿಣ ಕ್ಷೇತ್ರದಲ್ಲಿ ಕಂಡುಬರುತ್ತದೆಂ ಹೇಳುತ್ತಾರೆ. ತೋಳ ಹರಯಾ (ತೋಳರ) ತುಳುವರ ಮೂಲವ ಬೆಳಗಾಮಿನ ತೊಳಹರ ಮೂಲವೂ ಬೆಳಗಾಮಿನ ತೊಳಹ ಕುಟುಂಬಕ್ಕೆ ಸೇರಿದವರೆಂದು ಅನುಮಾನಿಸಲಾಗಿದೆ. ಕೊಡಗು ರಾಜ ಕೊಡಗಿನಲ್ಲಿ ನೆಲೆಸಿದ ಗೌಡರಿಗೆ ಕೊಟ್ಟ ನಿರೂಪದಲ್ಲಿ 'ತುಳುವ ಎಂಬುದಾಗಿ ನಮೂದಿಸಲಾಗಿದೆ. ಕೊಡಗು ರಾಜರು ಹಿಂದೆ ದಕ್ಷಿ ಜಿಲ್ಲೆಯನ್ನು 'ತುಳುನಾಡು' ಎಂದು ಕರೆಯುತ್ತಿದ್ದರಿಂದ ಅಲ್ಲಿಂ ಬಂದ ಗೌಡರನ್ನು 'ತುಳುವ' ಎಂದುಕರೆದಿದ್ದಾರೆ. ತುಳುನಾಡಿನಿಂ ಬಂದವರೆಲ್ಲರನ್ನೂ ತುಳುವ ಎಂಬುದಾಗಿ ಕರೆಯಲಿಲ್ಲ. ಬರೆ ಗೌಡರನ್ನು ಕರೆಯುವುದಕ್ಕೆ ಕಾರಣವೇನೆಂಬುದು ಪ್ರಶ್ನೆಯಾಗಿದೆ.

ಈ 'ಗೌಡರು' ತುಳು ನಾಡಿನಿಂದ ಬಂದದ್ದಕ್ಕೆ ತುಳುವರಾದರೂ ಅಥವಾ ಪ್ರೊ. ಪಿ. ಗುರುರಾಜ ಭಟ್ಟರು ಹೇಳುವ ರೀತಿಯಲ್ಲಿ ಇವರಿ ತುಳುವ ಎಂಬ ಹೆಸರು ಬಂದಿತೋ ಎಂಬುದಾಗಿ ಅನುಮಾನಿ ಬೇಕಾಗಿದೆ. ದಕ್ಷಿಣ ಕನ್ನಡ ಮತ್ತು ಕೊಡಗಿನಲ್ಲಿ ವಾಸವಾಗಿ ಈ "ಗೌಡರು" ತುಳುವ ಕುಲಕ್ಕೆ ಸೇರಿದ್ದರೆ ಇವರಲ್ಲಿ ಹೆಚ್ಚಿನ ಜನರು ಈಗಲೂ ಮಾತನಾಡುತ್ತಿರುವ ಭಾಷೆ ಹಳೆಗನ್ನಡವಾಗಿರುವಾಗ ಇವರು

ಸು ಭಾಷೆಯನ್ನೇ ಮಾತನಾಡಬೇಕಿತ್ತು. ಆದರೆ ಅದು ಹಾಗಿಲ್ಲ. ನ್ನೊಂದು ಚರ್ಚಾಸ್ಪದ ಸಂಗತಿ ಎಂದರೆ ವಿಜಯನಗರದ ಕೃಷ್ಣ ವರಾಯನು ತುಳುವ ವಂಶಕ್ಕೆ ಸೇರಿದವನಾದರೂ ಅವನು ಕನ್ನಡ ಷೆಯಾಡುತ್ತಿದ್ದನೆಂದು ಚರಿತ್ರೆಯಲ್ಲಿ ಬರುತ್ತದೆ. ಹಾಗಿರುವಾಗ ಷೆಗೂ ಕುಲಕ್ಕೂ ಯಾವ ಸಂಬಂಧವಿಲ್ಲವೆಂದಾಯಿತು.

ನಮ್ಮಲ್ಲಿ ಕೆಲವು ಹಿರಿಯರು ದಕ್ಷಿಣ ಕನ್ನಡ ಮತ್ತು ಕೊಡಗಿನ ಡರು" ಐಗೂರ ಸೀಮೆಯಿಂದ ಬಂದವರೆಂದು ಹೇಳಿಕೊಳ್ಳುತ್ತಾರೆ. ಗೂರು ಹಾಸನ ಜಿಲ್ಲೆಯಲ್ಲಿದೆ. ಅಲ್ಲಿನ ಜನರು ಮಾತಾಡುವ ಕನ್ನಡ ಷೆಗೂ ಕೊಡಗಿನಲ್ಲಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಡರು" ಮಾತಾಡುವ ಕನ್ನಡಕ್ಕೂ ಯಾವ ರೀತಿಯಲ್ಲಿಯೂ ೋಲಿಕೆ ಇಲ್ಲ. ಹಾಗಿರುವಾಗ ಇವರು ಇಕ್ಕೇರಿ ವಂಶದ ನಾಯಕರ ಲದಲ್ಲಿ ಐಗೂರಿನ, ಸುತ್ತಮುತ್ತಲಿರುವ ಸ್ಥಳಕ್ಕೆ ಬೇರೆ ಕಡೆಯಿಂದ ಂದು ನೆಲಸಿದ ಕೆಲವು ಸಮಯದಲ್ಲಿ ದಕ್ಷಿಣ ಕನ್ನಡಕ್ಕೆ ೋಗಿರಬೇಕೆಂದು ಅರ್ಥವಾಗುತ್ತದೆ. 1148ರ ಕಲ್ಯಾಣ ಚಾಲುಕ್ಯರ ಸನ ಮತ್ತು ವಿಜಯನಗರದ ಉತ್ತರ ದಕ್ಷಿಣ ಕರಾವಳಿಯ ಸನಗಳಲ್ಲಿ ಬರುವ ತೊಳಹಾರ, ತೊಳಪ, ತುಳವರ ಗೌಡರಾದರೆ ಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಡಗಿನಲ್ಲಿ ವಾಸವಾಗಿರುವ "ಗೌಡರು" ಕ್ಷಿಣ ಮತ್ತು ಉತ್ತರ ಕರಾವಳಿ ಮತ್ತು ಬೆಳಗಾಂ ಜಿಲ್ಲೆಯಲ್ಲಿ ಸವಾಗಿದ್ದಿರಬಹುದೆಂದು ಅನುಮಾನಿಸಬಹುದು. ಈ ವಿಷಯದಲ್ಲಿ ಕ್ಷಿಣ ಕನ್ನಡ, ಉತ್ತರ ಕನ್ನಡ ಶಾಸನಗಳನ್ನು ಸರಿಯಾಗಿ ಆಳವಾಗಿ ರಿಶೋಧನೆ ನಡೆಸಿದರೆ ನಮಗೆ ಅರಿವಾಗಬಹುದು. ಏನೇ ಆದರೂ ಗೂರು ಇವರ ಮೂಲಸ್ಥಾನವಲ್ಲವೆನ್ನುವುದು ಖಚಿತ.

ಒಂದು ವಿಷಯ ಮಾತ್ರ ಖಂಡಿತವಾಗಿ ಹೇಳಬಹುದು. ದೇನೆಂದರೆ ಈ ಜನರಿಗೆ ವಿಜಯನಗರ ಪತನವಾದ ನಂತರ ದಕ್ಷಿಣ ನ್ನಡದಲ್ಲಿಯೂ, ಕೊಡಗಿನಲ್ಲಿಯೂ ನೆಲೆಸುವವರೆಗೆ ಒಂದೇ ಕಡೆ ಲೆ ನಿಲ್ಲಲು ಸರಿಯಾದ ಸೌಲಭ್ಯವಿರಲಿಲ್ಲವೆಂದು ಮನವರಿಕೆ ಾಗುತ್ತದೆ. ಈ ಗೌಡರು ತುಳುವ ಸಂತತಿಯಲ್ಲದಿದ್ದರೆ ಕೊಡಗು ಜನ ಕಾಲದಲ್ಲಿ ಕೊಟ್ಟ ನಿರೂಪದ "ತುಳುವ" ಎಂಬ ಪದವು ವರ ವಿಷಯದಲ್ಲಿ ತಪ್ಪು ಭಾವನೆಯಿಂದ ನಮೂದಿಸಲ್ಪಟ್ಟಿದೆ ಎಂದು ನ್ನ ಭಾವನೆ.

ಸತ್ಯಸಂಗತಿ ಏನೇ ಇದ್ದರೂ ಈ ಗೌಡ ಜನಾಂಗದವರು ಈಗ ಲವು ದಶಕಗಳ ಹಿಂದೆ ಇದ್ದ ಬಡಸ್ಥಿತಿ ಮತ್ತು ಹಿಂದುಳಿದಿರುವಿಕೆಗೆ ಾರತದ ಅನೇಕ ಪಂಗಡಗಳಿಗೆ ಉಂಟಾದ ಪರಕೀಯರ ದಾಳಿಯ ೊಂದರೆಯು ಇವರಿಗೆ ತಟ್ಟಿ ಇವರ ಅವನತಿಗೆ ಕಾರಣವಾಗಿದೆ ಎಂದು ೇಳಬಹುದು. ಒಂದು ಊರಿನಿಂದ ಇನ್ನೊಂದು ಊರಿಗೆ ವಲಸೆ ರುವುದಕ್ಕೆ ವಿಜಯನಗರದ ಸಾಮ್ರಾಜ್ಯ ಪತನದ, ಮಹಮದೀಯರ ಾಳಿಯೂ ಕಾರಣವಾಗಿದೆ ಎಂದು ತೋರುತ್ತದೆ. ಒಂದು ಊರಿನಿಂದ ಇನ್ನೊಂದು ಊರಿಗೆ ವಲಸೆ ಹೋಗಿ ಅಲ್ಲಿ ನೆಲೆನಿಂತ ಜನರೊಡನೆಯೂ ಅಲ್ಲಿನ ಪ್ರಾಕೃತಿಕ ಸನ್ನಿವೇಶಗಳಿಗೆ ಹೊಂದಿಕೊಂಡು ತಮ್ಮ ಆರ್ಥಿಕ ಜೀವನವನ್ನು ಅಭಿವೃದ್ಧಿಗೊಳಿಸಿಕೊಂಡು ಬರುವುದು ಅಷ್ಟೊಂದು ಸುಲಭವಲ್ಲವಾದರೂ ಪ್ರಾಚೀನ ಕಾಲದ ಭಾಷೆ ಮತ್ತು ಸಂಸ್ಕೃತಿಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವುದು ಹಿಂದೂ ಸಂಸ್ಕೃತಿಯ ಅಂಗವಾಗಿರುವ ಈ ಜನರ ವಿಶಿಷ್ಟತೆಯನ್ನು ತೋರಿಸುತ್ತದೆ. ಅದೊಂದು ಹೆಮ್ಮೆ ಪಡುವ ವಿಚಾರವಾಗಿದೆ.

ಇವರು ಈಗ ನೆಲೆಸಿರುವ ಸ್ಥಳಕ್ಕಿಂತ, ಮೊದಲಿದ್ದ ಸ್ಥಳದಲ್ಲಿ ಸುವ್ಯವಸ್ಥಿತ ಮತ್ತು ಉನ್ನತ ಮಟ್ಟದ ಸಂಸ್ಕೃತಿಯನ್ನು ಹೊಂದಿದ್ದರೆನ್ನುವುದಕ್ಕೆ ಗೌಡರ ಮದುವೆ ಹಬ್ಬಗಳಲ್ಲಿ ಹೇಳುವ ಸೋಬಾನೆಗಳಿಂದ ನಮಗೆ ತಿಳಿದುಬರುತ್ತದೆ. ಸೋಬಾನೆಗಳು ಕನ್ನಡ ನಾಡಿನಲ್ಲಿ ಜನಪದ ಗೀತೆಯ ವರ್ಗಕ್ಕೆ ಸೇರಿದವು. ಇವು ಒಂದು ಜನಾಂಗದ ಒಂದು ಸಂಸ್ಕೃತಿಯ ಹೃದಯದಿಂದ ಮೂಡಿ ಬಂದ ಸಾರಸ್ವತ ಸಂಪತ್ತು. ಸೋಬಾನೆಗಳು ನಾಗರೀಕತೆಯಿಂದ ವಿರೂಪಗೊಳ್ಳದೆ ತನ್ನ ಸಹಜ ಸೊಬಗನ್ನು ಉಳಿಸಿಕೊಂಡು ಕಳಕಳಿಸುತ್ತಿರುವ ಕುಸುಮ ಸಂಚಯ. ಹೃದಯದಿಂದ ಮೂಡಿಬಂದು ನೇರವಾಗಿ ಹೃದಯವನ್ನು ಪ್ರವೇಶಿಸುವ, ಹೃದಯವನ್ನು ತನ್ನದಾಗಿಸುವ ಶಕ್ತಿ ಈ ಜಾನಪದ ಗೀತೆಗಳಲ್ಲಿದ್ದಂತೆ ಮತ್ತಾವ ಸಾಹಿತ್ಯ ಪ್ರಕಾರಕ್ಕೂ ಇಲ್ಲ. ನಮ್ಮ ಸೋಬಾನೆಗಳು ನಮ್ಮ ಜನರ ಪ್ರಾಚೀನ ರೀತಿ ನೀತಿ, ಕುಲ ಧರ್ಮಕ್ಕನುಸಾರವಾಗಿ ಬಹು ಹಿಂದಿನಿಂದಲೂ, ಈಗಲೂ ಹಾಡುತ್ತಿರುವ ಗೀತೆಗಳು. ಸೋಬಾನೆಗಳು ಗೌಡರ ಪ್ರತಿಯೊಂದು ಮಂಗಳ ಕಾರ್ಯಗಳಲ್ಲಿ ಹಾಡುವ ಗೀತೆಗಳು. ಈ ಹಾಡುಗಳನ್ನು ಒಂದೊಂದಾಗಿ ಹಾಡುತ್ತಾ ಹೋದರೆ ನಮ್ಮ ಸಂಸ್ಕೃತಿಯ ಪರಂಪರೆಯ ಅರಿವು ನಮಗಾಗುವುದು. ಮಗುವಿನ ಜನನದಿಂದ ಹಿಡಿದು ಬದುಕಿನ ಎಲ್ಲಾ ಹಂತಗಳಲ್ಲೂ ನಮ್ಮಲ್ಲಿ ಹಾಡುವ ಹಾಡುಗಳಿವೆ.

ಹಿಂದೂ ಸಮಾಜದ ವೈಭವಯುತವಾದ ಮದುವೆ ಸಂಪ್ರದಾಯಗಳು ನಮ್ಮಲ್ಲಿ ಕಂಡುಬರುತ್ತವೆ. ಹೆಣ್ಣಿಗೆ ಮದುವೆಯಲ್ಲಿ ಶೃಂಗರಿಸುವಾಗ ಮುತ್ತಿನ ಚೆಂಡು ಮೂವತ್ತು ನವಲಕ್ಕಿ ಹವಳದ ಚೆಂಡು ಹದಿನಾರು ನವಲಕ್ಕಿ ಹಿಂಗಡಗ ಮುಂಗಡಗವೆಂಬ ಎಂಟು ಕಡಗ, ಅರಳೋಲೆ ಹಸ್ತದ ಕಡಗ ಮುಂತಾದವುಗಳ ಹೆಸರನ್ನು ಹೇಳುತ್ತಾರೆ. ಹೆಣ್ಣಿಗೆ ತೊಡಿಸುವ ಬಟ್ಟೆಬರೆಗಳಾದರೋ ಹನ್ನೆರಡು ವರಹದ ಪಟ್ಟೆಸ್ಯಾಲೆ, ಬೊಟ್ಟು, ಕುಟ್ಟದ ರವಕೆ - ಇವುಗಳಿಂದ ಶೃಂಗರಿಸಬೇಕೆಂದು ಕೇಳಿಕೊಳ್ಳುತ್ತಾಳೆ ಮಾವನಾಗುವವನನ್ನು ಗಂಡಿನ ತಂಗಿ. ಇವುಗಳ ಉದಾಹರಣೆಯಿಂದ ಹಿಂದಿನ ಕಾಲದಲ್ಲಿ ಐಶ್ವರ್ಯದಿಂದ ಬಾಳಿ ಬದುಕಿದ ಜನಾಂಗವೆಂದು ಕಂಡುಬರುತ್ತದೆ. ಉಡುಪು ಆಭರಣಗಳನ್ನು ಒದಗಿಸಲು ಶಕ್ತಿ ಇಲ್ಲದವರು ಸಾಲವಾಗಿಯೂ 'ಎರವಿನ' ಆಭರಣಗಳನ್ನು ತೊಡಿಸುವ ಪದ್ಧತಿ ಈಗಲೂ ಇದೆ.

ಇದು ಬರೆ ಹಾಡುಗಾರಿಕೆಯಲ್ಲಿಯೇ ಇಲ್ಲದೆ ಆಚರಣೆಯಲ್ಲಿತ್ತೆಂಬುದಕ್ಕೆ ಶ್ರೀ ತ್ರಿವಿಕ್ರಮರು ಕೊಟ್ಟಿರುವ ಆಭರಣಗಳ ಪಟ್ಟಿಯಿಂದ ಖಚಿತವಾಗುತ್ತದೆ. ವಿಜಯನಗರದ ಸಾಮ್ರಾಜ್ಯದ ಕಾಲದಲ್ಲಿ ಶ್ರೀಮಂತರು ಮಾತ್ರವಲ್ಲದೆ ಸಾಮಾನ್ಯ ಜನರು ಆಭರಣಗಳನ್ನು ತೊಡುತ್ತಿದ್ದರು. ಗಂಡಸರು ಮುತ್ತು ರತ್ನಗಳಿಂದ ಕೆತ್ತಲ್ಪಟ್ಟ ಕಿವಿಯುಂಗುರಗಳ ರತ್ನದ ಹಾರಗಳನ್ನು ಧರಿಸುತ್ತಿದ್ದರು. ಹೆಂಗಸರು ವಜ್ರದ ಬೆಂಡೋಲೆ, ಮುತ್ತಿನ ಮೂಗುತಿ, ರತ್ನ ಮತ್ತು ಚಿನ್ನದ ಹಾರ ಮತ್ತು ರತ್ನಗಳಿಂದ ಕೆತ್ತಲ್ಪಟ್ಟ ಚಿನ್ನದ ಬಳೆ ಮುಂತಾದ

10ನೇ ಪುಟಕ್ಕೆ



# ಪತ್ರ ವಿಭಾಗ :

### ಶುಭಹಾರೈಕೆ

Madam,

It's a great pleasure to see our Kodagu Sangathi grow to the highest point and come up with spontaneous ray, with new ventures cropping with other news fortnightly in the state.

We still remember the day when Kodagu Sangathi started its inception three years back with an intention of service, towards maintenance of high traditions of Gowdas' ancient culture, to the people of Gowda community in the state. We are happy that it has achieved its aims.

We receive Kodagu Sangathi regularly in time and relish the contents in it. We are happy to see the entity grow and the teams successful glorious days.

With Best wishes and prayers, may the Lord Venkateshwara bless with spirit and strength the Kodagu Sangathi team to grow and fulfill the aims and goals to the greatest height in meeting the challenges of the coming millennium.

From : **Chettimada. B. Kariappa**
Wife : **Nidyamale Prabha Somanna**
**Vinayak & Vaibhav**

### ಜ್ಞಾನಪೀಠ ಪ್ರಶಸ್ತಿ ಪಡೆದ ಕವಿಗಳು ಮತ್ತು ಕೃತಿಗಳು

1. ಕುವೆಂಪು - ಶ್ರೀ ರಾಮಾಯಣ ದರ್ಶನಂ
2. ದತ್ತಾತ್ರೇಯ ರಾಮಚಂದ್ರ ಬೇಂದ್ರೆ - ನಾಕುತಂತಿ
3. ಶಿವರಾಮ ಕಾರಂತ - ಮೂಕಜ್ಜಿಯ ಕನಸುಗಳು
4. ಮಾಸ್ತಿ ವೆಂಕಟೇಶ್ ಅಯ್ಯಂಗಾರ್ - ಚಿಕ್ಕವೀರ ರಾಜೇಂದ್ರ
5. ಡಾ. ವಿನಾಯಕ್ ಕೃಷ್ಣ ಗೋಕಾಕ್ - ಭಾರತದ ಸಿಂಧೂರ ರಶ್ಮಿ

ಸಂಗ್ರಹ : ಹುಲಿಮನೆ ಆರ್ ಲೋಕೇಶ
ಮದೆ ಗ್ರಾಮ

---

"ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆಯು ಗೌಡರ ಶ್ರದ್ಧಾಪೂರ್ಣ ಸೇವೆಯಲ್ಲಿ ಸದಾ ನಿರತ.

ಪಟ್ಟಡ ಪ್ರಭಾಕರ

### ಯಾವುದರಲ್ಲಿ ಏನೇನು

| ವಿಷಯ | ವಿಷ ಪದಾರ್ಥಗಳು |
|---|---|
| ಕಾಫಿ | ಕೆಫಿನ್ |
| ಚಹಾ | ಟೆನಿನ್ |
| ಬೀಡಿ, ಸಿಗರೇಟು | ನಿಕೋಟಿನ್ |
| ಮದ್ಯ | ಆಲ್ಕೋಹಾಲ್ |

**ಧೂಮಪಾನ ಹಾಗೂ ಮದ್ಯಪಾನ ನಿಷೇಧ ಆರೋಗ್ಯಕ್ಕೆ ಪ್ರಸ**

* * *

### ವ್ಯತ್ಯಾಸಗಳು

ಹೆಂಗಸರಂತೆ ವಟವಟಗುಟ್ಟಿ ರಕ್ತ ಹೀರುವುದು – ಸೊಳ್ಳೆ
ರಾಜಕಾರಣಿಯಂತೆ ಸದ್ದಿಲ್ಲದೆ ರಕ್ತ ಹೀರುವುದು – ತಿಗಣೆ

ಹುಲಿಮನೆ ರಾಮಣ್ಣ ಲೋ

---

9 ನೇ ಪುಟದಿಂದ

ಆಭರಣಗಳನ್ನು ಹಾಕಿಕೊಳ್ಳುತ್ತಿದ್ದರು. ಆಗ ಮುಖ್ಯವಾಗಿ ಹೆ ಬಳಕೆಯಲ್ಲಿದ್ದ ಆಭರಣಗಳೆಂದರೆ ಮಾಂಗಲ್ಯ, ಮೂಗುತಿ, ತಾಯ ಮುತ್ತಿನ ಪದಕಹಾರ, ಮೋಹನ ಸರ, ಕಟ್ಟಣಿ, ಮುತ್ತಿನ ವಾ ಬೆರಳುಂಗುರು, ಪೆಂಡೆಯ ಮಣಿದಾಮ ಅಥವಾ ಡಾಬು, ದುಂ ಮುತ್ತಿನ ಕೊರಳ ಹಾರ, ಚಿನ್ನದ ಸರ, ಕಂಕಣ, ತೋಳ ಬಳೆಗ ದುಂಡು ಹವಳದ ಕೈಕಟ್ಟು ಮುದ್ರಿಕೆ, ಹೊಸ ಕುಂದಣ ಚಳತುಂ ಜಡೆ ಬಂಗಾರ, ಹೊಂಗ್ಯಾದಿಗೆ, ಬಂಗಾರದ ಹರಳಿನ ಕಟೆ, ಮುತ್ತಿ ಮೂಗುತಿ, ಕೆತ್ತಿದ ವಾಲೆ, ಇತ್ತರ ಬುಗುಡಿ, ನೆತ್ತಿಗೆ, ಅರಳೆಲೆ, ಚಿತ್ರ ರ್‍ಯಾಗಟೆ, ಹಸ್ತ ಕಡಗ, ಚೂಡ್ಯವಂಕಿ, ರತ್ನದ ಪ ಮುಂತಾದವುಗಳಿದ್ದವೆಂದು ತಿಳಿದುಬರುತ್ತದೆ.

ಇದು ಅಲ್ಲದೆ ಎಣ್ಣೆ ಅರಿಸಿನ ಶಾಸ್ತ್ರಕ್ಕೆ ಕೂರಿಸುವಾಗ ಯಾ ಮರದ ಮಣೆಯನ್ನಿಟ್ಟಿರಬೇಕು, ಹಸೆಯನ್ನು ಹೇಗೆ ಬರೆಯಬೇ ಎಂಬುದನ್ನು ತಿಳಿಸುತ್ತವೆ. "ಸೋದರದ ಹಿರಿಭಾವ ಬರುತ್ತಾರೆ ಅವ ಬರುವಾಗ ಚೆನ್ನಾಗಿ ಕಾಣಬೇಕು. ಚೆನ್ನಾಗಿಕಾಣುವಂತೆ ಸುಂದರವಾ ಬರೆಯಬೇಕು. ಸೂರ್ಯದೇವರ ಅಕ್ಕಬರುತ್ತಾರೆಂದು ಚೌಕಟ್ಟಾ ಬರೆಯಿರಿ. ಆ ಬಣ್ಣ ಬರೆಯಿರಿ ಈ ಬಣ್ಣ ಬರೆಯಿರಿ ಸೂರ್ಯದೇವ ಬಣ್ಣ ಚಂದ್ರದೇವರ ಬಣ್ಣ ಬರೆಯಿರೆಂದು" ಕೇಳಿಕೊಳ್ಳುತ್ತಾರೆ. ಮದುಮಕ್ಕಳು ಕೂರುವ ಹಸೆಯು ಬಹಳ ಅಲಂಕೃತವಾಗಿರಬೇಕೆಂ ಆಸೆ, ಬರೆದ ಹಸೆ ಎಲ್ಲರೂ ಒಪ್ಪಬೇಕೆಂಬ ಆಸೆ. ಚಿತ್ರಕಲೆಗಳಿಗ ಶಿಲ್ಪಕಲೆಗಳಿಗೂ ತವರುಮನೆ ಎಂದೆನಿಸಿದ ಭಾರತೀಯ ಸಂಸ್ಕೃತಿಂ ಅಂಶವಾಗಿರುವ ಗೌಡರಲ್ಲಿ ಇಂತಹ ಆಚಾರಶೀಲವಾ ಪದ್ಧತಿಗಳಿರುವುದರಲ್ಲಿ ಅತಿಶಯೋಕ್ತಿಯ ಮಾತಾಗಲಾರದು.

(ಮುಂದುವರೆಯುತ್ತ

ಲೇಖಕರು : ಪ್ರೊ. ಪೂಜಾರಿ ಮೊಣ್ಣ

# ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದ ಅರೆಭಾಷೆ ಬಾಂಧವರು ತಮ್ಮ ಮನೆಯ ಗೋತ್ರವನ್ನು ಸಂಗಾತಿಗೆ ತಿಳಿಸುವಂತೆ ವಿಶೇಷ ವಿನಂತಿ

ಇಡೀ ಭರತ ಖಂಡದ ಮೂಲೆ ಮೂಲೆಯ ಹಳ್ಳಿಗಳಲ್ಲಿ ತಮ್ಮನ್ನು ತಾವೇ ಗುರ್ತಿಸಿಕೊಳ್ಳುವುದಕ್ಕೆ ಯಾವುದಾದರೊಂದು ನಾಮವನ್ನು ಿಸುವುದು ಸಹಜ. ಅಂತೆಯೇ ಪಶ್ಚಿಮ ಘಟ್ಟ ಪ್ರದೇಶದಲ್ಲಿ ವಾಸವಿರುವ ಅರೆಭಾಷಿಕ ಗೌಡ ಜನರು ತಮ್ಮನ್ನು ಗುರ್ತಿಸಿಕೊಳ್ಳಲು ಮನೆಯ ೯ರನ್ನು ಬಳಸುವುದು ರೂಢಿಯಲ್ಲಿದೆ. ಹಾಗೆಯೇ ಕನ್ನಡ ಜಿಲ್ಲೆಯಲ್ಲಿ ಸುಮಾರು 700, ಕೊಡಗಿನಲ್ಲಿ ಸುಮಾರು 375 ಗೌಡ ಮನೆಯ ೯ರಿನಿಂದ ಕರೆಯಲ್ಪಡುತ್ತದೆ. ಮನೆಯ ಹೆಸರುಗಳನ್ನು ಕಳೆದ ಮತ್ತು ಈ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ. ಸಂಬಂಧ ಪಟ್ಟ ಕುಟುಂಬಸ್ಥರು ುವಿಟ್ಟು ತಮ್ಮ ತಮ್ಮ ಮನೆಯ ಗೋತ್ರಗಳ ಹೆಸರನ್ನು 25 ಪೈಸೆಯ ಅಂಚೆ ಕಾರ್ಡಿನ ಮೂಲಕ ಬರೆದು ತಿಳಿಸಿದರೆ ಗೋತ್ರಗಳ ಪ್ರಕಾರ ಗಡಿಸಿ, ಜನಾಂಗದ ಉಪಯೋಗಕ್ಕಾಗಿ ಖಂಡಿತ ಪ್ರಕಟಿಸುತ್ತೇವೆ. ಅರೆಭಾಷಿಕರು ಕೊಡಗು ದಕ್ಷಿಣ ಕನ್ನಡವೆಂಬ ಭಿನ್ನವಿಲ್ಲದೆ ಪ್ರತಿಯೊಬ್ಬರು ನಿಟ್ಟಿನಲ್ಲಿ ಸಹಕರಿಸುವಂತೆ ಸಂಗಾತಿ ಕೋರುತ್ತದೆ. ಒಬ್ಬರು ತಮಗೆ ತಿಳಿದಿರುವಷ್ಟು ಮನೆಯ ಗೋತ್ರಗಳ ಹೆಸರನ್ನು ಬರೆದು ತಿಳಿಸಬಹುದು.

ವಂದನೆಗಳು.

ಸಂಪಾದಕಿ

## ಗೌಡ ಕುಟುಂಬದ ಹೆಸರುಗಳು
## ಕೊಡಗು ಜಿಲ್ಲೆ

| | | | | | |
|---|---|---|---|---|---|
| ಪೆಮನೆ | ಉಗ್ರಾಣಿರ | ಕಾಶ್ಪಾಡಿ | ಕಾಲಮಂದಿರ | ಕೊಳ್ಳೀರ | ಕೊರಿಯಾರ್ |
| ಮ್ಯಂಡ್ರ | ಉಪ್ಪುಕುಳಿ | ಕುರುಂಜಿ | ಕೊಂಬನ | ಕೆಮ್ಮಾರನ | ಕೊರಿಯನ |
| ಚ್ಚಿಪಟ್ಟಿರ | ಉಪ್ಪಂಡಿರ | ಕಾನೆಹಿತ್ಲು | ಕೀಜನ | ಕುಂಬನ | ಕೊಳಂಗಾಯ |
| ಚ್ಚಾಂಡಿರ | ಊರೋಳನ | ಕುಯ್ಯಮುಡಿ | ಕೊತ್ತೋಳಿರ | ಕುಂದನ | ಕಂಟ್ರಮಜಲು |
| ಂಚೆಮನೆ | ಊರುಬೈಲು | ಕೊಂಪುಳಿರ | ಕಲ್ಲೆಂಬಿ | ಕುವೆಂಡ್ರ | ಕಡೋಡಿರ |
| ಮ್ಮವ್ವನ | ಎಕ್ಕಡ್ಕ | ಕಟ್ಟೆಪುಣಿ | ಕಾಚೆಲು | ಕೋಟೆಮನೆ | ಕುಕ್ಕೇರ |
| ಯ್ಯೇಟಿರ | ಎಣ್ಣೆಕಾಳು ಮನೆ | ಕೇನೇರ | ಕಾಕೇರಿರ | ಕಾವೇರಿಮನೆ | ಕುಲ್ಲಚೆಟ್ಟೀರ |
| ರಂಬೂರು | ಎಡಕೇರಿ | ಕುಕ್ಕನೂರು | ಕೈಬಿಲ್ಲಿರ | ಕಲ್ಲೆಮ್ಮನ | ಕೊಲ್ಯನ |
| ಜ್ಜೆಗೌಡನ | ಎರ್ಮೆಕಾಲು | ಕುದುಕುಳಿ | ಕೊಯಾಂಗಜ್ಜೆ | ಕುತ್ತಿಯಾಡಿ | ಕಾಂಗೀರ |
| ಳಿಕೆ | ಎಣಿಯಾರು | ಕೊಡೆಕಲ್ಲು | ಕಟ್ಟಕೋಡಿ | ಕೊಳ್ತಿಗೆ | ಕೂರನ |
| ಣ್ಣಚ್ಚಿರ | ಒಡಿಯನ | ಕರಕರನ | ಕೋಲ್ವಾರು | ಕಲ್ಲುಗುಡ್ಡೆ | ಖಂಡಿಗೆ |
| ರ್ಪೆಗಟ್ಟೆ | ಒಡೆಯಪ್ಪನ | ಕೋಳಿಬೈಲು | ಕೊಂಬಡ್ರ | ಕತ್ರಿಕೊಲ್ಲಿ | ಗುಡ್ಡೇರ |
| ಚ್ಚುಡ | ಕುಂಬುಗೌಡನ | ಕೇಕಡ | ಕಳವಾಚೆ | ಕೀಲಾರು | ಗುಡ್ಡನ |
| ಕ್ಕಾರಿ | ಕುದುಪಜೆ | ಕೋಟೇರ | ಕಟ್ರತ್ತನ | ಕಲ್ಲುಮುಟ್ಲು | ಗೂಡಂಜಿ |
| ಂಬೆಕಲ್ಲು | ಕಾಳೇರಮ್ಮನ | ಕೊಡಪಾಲ | ಕೊರಂಬಡ್ಕ | ಕೇಡನ | ಗುತ್ತಿಮುಂಡನ |
| ಚ್ಚಲ್ಪಡಿ | ಕೆದಂಬಾಡಿ | ಕೇಟೋಳಿರ | ಕರುಂಜಿ | ಕಡೋಡಿರ | ಗುತ್ತಿಯೇಟಿ |
| ಮೆಚೂರು | ಕುಂಞ್ಞಾಳಿ | ಕುಂಜಿಲನ | ಕೊಂಬಾರನ | ಕೋಡಿಯಾಡ್ಕ | ಗುಡ್ಡೆಮನೆ |
| ಂಚೇರ | ಕುಲ್ಲಚ್ಚನ | ಕಳಂಜನ | ಕೊಟ್ಟಂಗೇರಿ | ಕೋಪನ | ಗೋವಿಂದಮ್ಮನ |
| ಮ್ಮಾಜೀರ | ಕೂಡಿಕಂಡಿ | ಕುಂಚಡ್ಕ | ಕೆಂಜನ | ಕೆಳಗೆಮನೆ | ಗುತ್ತು |
| ಂಬ್ರಾಟಿ | ಕುಯಿಂತೋಡು | ಕುದನೆಕೋಡಿ | ಕತ್ರಿರ | ಕಾಲ್ಯನ | ಗೌಡುದಾರೆ |
| ತ್ತೇಡಿ | ಕರುಣಯ್ಯನ | ಕಾಂಗೀರ | ಕೋಳುಮಾಡನ | ಕಾಚಲು | ಗೋಣಿಗಾರ |
| ನೇರ | ಕಾನಡ್ಕ | ಕಾಳೆಯಂಡ್ರ | ಕುರಿಕಡ | ಕಾಚಲಂಡ್ರ | ಗೌಡನ ಮನೆ |
| ಜಡ್ಕ | ಕೋಡಿ | ಕಾಯರ | ಕೆರೆಮನೆ | ಕುಟ್ಟನ | ಚೆಟ್ಟಿಮಾಡ |
| ಜೀರ | ಕಡ್ಯದ | ಕುಟ್ಟಮಣೆಯನ | ಕೇಚಪ್ಪನ | ಕುಂಡ್ಯನ | ಚೊಕ್ಕಾಡಿ |
| ಟ್ಟಣಿಕೆ | ಕೊಲ್ಯದ | ಕೋಳುಮುಡಿಯನ | ಕೊಳುಂಬೆ | ಕುರ್‌ನೇರಿ | ಚೆದುಕಾರು |
| ದ್ಯಡ್ಕ | ಕೋರನ | ಕಡ್ಲೇರ | ಕುಂಬಳಚೇರಿ | ಕಾನಡ್ಕ | ಚಾಂಗನ |
| ಉದಿಯನ | ಕೊಡಗನ | ಕೊಡಗದ್ದೆ | ಕುಂದಲ್ಪಾಡಿ | ಕಲ್ಲುಗದ್ದೆ | ಚೊದಾಡಮ್ಮನ |
| ಉಳುವಾರನ | ಕೂಪೇರ | ಕೋಚನ | ಕೋಟುಮಾಡ | ಕುತ್ಯಾಡಿ | ಚೀಯಪ್ಪನ |
| ಉಡುದೋಳಿ | | | | | |

| | | | | | |
|---|---|---|---|---|---|
| ಚಂಡೀರ | ಪಡ್ನಂಬೈಲು | ಬಾರಿಕೆ | ಮಿತ್ತೂರು | ದೋಲ್‌ಪಾಡಿ | ಯಂಕನ |
| ಚಟ್ಟಡ್ಕ | ಪಾಡಿ | ಬಾರನ | ಮೋಗೇರ | ದಬ್ಬಡ್ಕ | ಯಾಲದಾಳು |
| ಚಟ್ಟೆನೆರವನ | ಪಾರೇರ | ಬಳಪದ | ಮುಂಡೋಡಿ | ದೊಡ್ಡಡ್ಕ | ಯಾಪರೆ |
| ಚಿಲ್ಲನ | ಪಾರೆಮಜಲು | ಬೊಳ್ಳೂರು | ಮೂವನ | ದೇರಾಜೆ | ರಾಮಕಜೆ |
| ಚೆರಿಯಮನೆ | ಪೊಯ್ಯಕಂಡೀರ | ಬೈಲೇರ | ಮೇಡತನ | ದೆರಣ್ಣನ | ಲಕ್ಕಂಡ್ರ |
| ಚಿಯಂಡಿರ | ಪೊಕ್ಕುಳಂಡ್ರ | ಬಾರಿಯಂಡ | ಮೋಂಟಡ್ಕ | ದಾಯನ | ಲಕ್ಕಪ್ಪನ |
| ಚೋಂಡಿರ | ಪಾಡಿಚೆಟ್ಟಿರ | ಬೈಮನ | ಮೊಟ್ಟೇರ | ದೇವಾಯಿರ | ಲಕ್ಕುಂಡಿರ |
| ಚಂದಡ್ಕ | ಪಾರೆಪ್ಪಾಡಿ | ಬೆಳ್ಯನ | ಮಂದೊಡಿ | ದಂಡಿನ | ವಾಟೇರಿರ |
| ಚೆಳ್ಳಂಗಾರ್ | ಪೆಲ್‌ತಡ್ಕ | ಬೊಳ್ಳುಮನೆ | ಮಂದ್ರಿರ | ದೇಶಕೋಡಿ | ಸೂದನ |
| ಚಂಗರಿ | ಪಂಜದ | ಬೊಮ್ಮಿಯನ | ಮೇರಕಜೆ | ದೊಡ್ಡೀರ | ಸುಳ್ಯಕೋಡಿ |
| ಚೊಟ್ಟಂಡ | ಪಟ್ಟಾಂದಿರ | ಬೇಕಲ್ | ಮೂಟೇರ | ನೆಯ್ಯೇಣೆರ | ಸೂರ್ತಲೆ |
| ಜೈನಿರ | ಪೋತಾಂಡ್ರ | ಬೊಳ್ತಜಿರ | ಮಾಡೆನ | ನಡುಗಲ್ಲು | ಸೆಟ್ಟೆಜನ |
| ಜತ್ತಣ್ಣನ | ಪೆರುಮುಂಡ | ಬಾಳೆಡಿ | ಮೂಡಗದ್ದೆ | ನಡುವಟ್ಟಿರ | ಸೋಣಂಗೇರಿ |
| ಜಪ್ಪೆಕೋಡಿ | ಪಂಜಿಪಳ್ಳ | ಬಾಡನ | ಮಡತ್ತಿಲ | ನಿಡ್ಯಮಲೆ | ಸುರುಳಿಮನೆ |
| ಜಪ್ಪೆಗೋವೆ | ಪನಿಯೋಡಿ | ಬೊಮ್ಮೆಗೌಡನ | ಮಜ್ಜಿಗೆ ಗೌಡನ | ನಂಗಾರು | ಸಬ್ಬಂಡ್ರ |
| ಪಟ್ಟಡ | ಪನಿಯಡ್ಕ | ಬೇರಿಕೆ | ಮಂಡೀರ | ನಾಟೋಳನ | ಸಣ್ಣಮ್ಮನ |
| ಪೊನ್ನಚ್ಚನ | ಪೂಜಾರಿ | ಬೆಳ್ಳಿಪಾಡಿ | ಮೇಚನ | ನೆರಿಯನ | ಸಣ್ಣಜನ |
| ಪೆರುಬಾಯಿ | ಪಡ್ನು | ಬಾಕಿಲನ | ಮಂಞ್ಞಪುರ | ನಂಬುಡಿರ | ಸೂದಾಡಮ್ಮನ |
| ಪಾಂಡನ | ಪಟ್ಟೆಮನೆ | ಬಡ್ಡನ | ತೆಕ್ಕಡೆ | ನಿಂಗಪ್ಪನ | ಸೋಮೆಟೀರ |
| ಪುಳಕಂಡ್ರ | ಪೂಜಾರಿ ಗದ್ದೆ | ಬಬ್ಬೀರ | ತುಮ್‌ತಜೆ | ನಡುಮನೆ | ಶಂಕರನ |
| ಪೇರಿಯನ | ಪೀಚೆಮನೆ | ಬೋಳನ | ತೋಟಂಬೈಲು | ನೆಕ್ಕಿಲ | ಶಿರಾಜೆ |
| ಪೋರೆಯನ | ಪಳಂಗಾಯ | ಬಿಟ್ಟೀರ | ತಳೂರು | ನೂಜುಬೈಲು | ಶಿರಕಜೆ |
| ಪುಳಂಜನ | ಪಲ್ಲೇತಿ | ಬಟ್ಯನ | ತೇನನ | ನಡುಬೆಟ್ಟು | ಹೊಸೂರು |
| ಪರ್ಲಕೋಟಿ | ಪಟ್ಯತಿ | ಬಲ್ಯಾಟನ | ತೊತ್ಯನ | ನಿಡ್‌ಬ್ಬೈ | ಹಂಡನ |
| ಪಳಂಗೋಟು | ಪಣಳೆ | ಬೊಟ್ಟುಮನೆ | ತೂಟೇರ | ನೆಡ್‌ಬ್ಬು | ಹೊದ್ದೇಟಿ |
| ಪಾಣತ್ತಲೆ | ಪೆಮ್ಮಟೆ | ಬೈಚನ | ತೇಲಪ್ಪನ | ನಾರ್ಕೋಡು | ಹೊಸಮನೆ |
| ಪೈಕೇರ | ಪಾರೆಕೋಡಿ | ಬಾಳೆಹಿತ್ಲು | ತಡಿಯಪ್ಪನ | ನಿಡಂಜಿ | ಹುಲ್ಲುಬೆಂಕಿ |
| ಪಾಂಡಿ | ಬೈಲೋಳಿರ | ಬಾಳಜಿ | ತಿರೋಡಿ | ನಂಜನಮಲೆ | ಹೊಸಗದ್ದೆ |
| ಪರಿಚನ | ಬಿದ್ರುಪಣೆ | ಮಳ್ಳಂದಾರಿ | ತೊಕ್ಕುಳಿ | ನಾಡ್ಯನ | ಹೊಸೊಕ್ಲು |
| ಪರಿವಾರ | ಬಿರುಮಣನ | ಮುದ್ಯನ | ತಮ್ಮಚ್ಚನ | ನಾಡೆಯ್ಯನ | ಹುಲಿಮನೆ |
| ಪೊನ್ನೇಟಿ | ಬಳ್ಳಡ್ಕ | ಮೂಲೆಮಜಲು | ತಂಟೆಪಾಡಿ | ನೆಲ್ಲಿಪುಣಿ | ಹುದೇರಿ |
| ಪಡಿಕಲ್ | ಬೆಪ್ಪುರನ | ಮೊಟ್ಟನ | ತೊರೆ | ನಡುಮುಟ್ಲು | ಹೋಸೋಳಿಕೆ |
| ಪುದಿನೆರವನ | ಬೈನೆರವನ | ಮತ್ತಾರಿ | ದೇವ ಜನ | ನಾರುಕೋಡಿ | ಹೆಮ್ಮನ |
| ಪೊಡನೊಳನ | ಬೈತಡ್ಕ | ಮುಕ್ಕಾಟಿರ | ದೇವಂಗೋಡಿ | ನೆಡಿಗಿಲು | ಹೊಳೆಕರೆ |

ಸಂಗಾತಿ ಪತ್ರಿಕೆ ಅಭಿವೃದ್ಧಿಯಾಗುತ್ತಿರುವುದು ತುಂಬಾ ಸಂತೋಷ ನಿಮ್ಮ ಶತಪ್ರಯತ್ನದಿಂದ ಗುರಿಸಾಧಿಸುವ ದಾರಿ ಕಾಣುತ್ತಿದೆ. ಅದರೊಡನೆ ನಿಮ್ಮ ಈಗಿರುವ ದೈನತೆ ಮುಂದುವರಿಯಲಿ. ನಿಮ್ಮದೆ ಆದ ಸ್ವಂತ ಸಂಗಾತಿಯ ನಿರ್ವಾಹಕ ಕಚೇರಿ ಪ್ರಿಂಟಿಂಗ್ ಪ್ರೆಸ್ ಅನ್ನು ಆದಷ್ಟು ಬೇಗ ನೋಡುವ ದಿನಗಳಿಗಾಗಿ ಕಾಯುತ್ತಿದ್ದೇನೆ.

ಪ್ರೊ. ಪೂಜಾರಿ ಮೊಣ್ಣಪ್ಪ

**1999ರ ಕಾರ್ಗಿಲ್ ಕಾರ್ಯಾಚರಣೆಯಲ್ಲಿ ಮಡಿದ ವೀರರ ಪಟ್ಟಿ**

| | ಭಾರತ | ಪಾಕಿಸ್ಥಾನ |
|---|---|---|
| ಸತ್ತವರು | 417 | 728 |
| ಅಧಿಕಾರಿಗಳು | 24 | 41 |
| ಗಾಯಾಳುಗಳು | 594 | ಗೊತ್ತಿಲ್ಲ |
| ಕಾಣೆಯಾದವರು | 7 | ಗೊತ್ತಿಲ್ಲ |



✦ ಕೌಂಡಿನ್ಯ

ಧಾರವಾಹಿ -14

ಅದು ಮಾವಿನ ತೋಪು !

ಎತ್ತ ನೋಡಿದರು ಮಾವಿನ ಮರಗಳ ಸಿರು ! ಮನಕ್ಕೆ ಒಂದು ರೀತಿ ಮುದ ಡುವ ತಂಪು ವಾತಾವರಣ !

ಮನಸ್ಸುಗಳು ವ್ಯಗ್ರವಾಗಿವೆ !

ರೇವತಿ ಮತ್ತು ಪ್ರಸನ್ನ ಈಗ ಎದುರು - ದುರಾಗಿ ನಿಂತುಕೊಂಡಿದ್ದಾರೆ. ಚೇತೋಹಾರಿ ನ್ನಿವೇಶ !

ಪ್ರಸನ್ನನ ಮುಖ ಬಿಳುಚಿಕೊಂಡಿದೆ !

ರೇವತಿ ಗಂಭೀರವಾಗಿ "ನನ್ನ ಗೆಳತಿ ಮೀನ ೈರಿ ಬರೆದಿದ್ದಾಳೆ. ದಯವಿಟ್ಟು ನನ್ನ ಂದೇಹಗಳಿಗೆ ಉತ್ತರ ನೀಡುತ್ತೀರಾ?"

ಪ್ರಸನ್ನ ಹುಬ್ಬೇರಿಸಿ ನೋಡಿದನು.

ರೇವತಿ "ನನ್ನ ಗೆಳತಿ ಸತ್ತಿದ್ದು ಹುಣ್ಣಿಮೆಯ ನ. ಆ ದಿನ ಮಧ್ಯಾಹ್ನ ನೀವು ಇದೇ ಾವಿನ ತೋಪಿನಲ್ಲಿ ಇರಲಿಲ್ಲವೆ?"

ಪ್ರಸನ್ನ ಕೋಪದಿಂದ "ಹುಣ್ಣಿಮೆ ಕಳೆದು ೋಗಿ ಇಪ್ಪತ್ತು ದಿನಗಳಾಗಿವೆ. ನಾನು ಗಾಗ ಮಾವಿನ ತೋಪಿಗೆ ಬರುತ್ತಿರುತ್ತೇನೆ. ರ್ಟಿಕ್ಯುಲರ್ ಆಗಿ ಹುಣ್ಣಿಮೆಯ ದಿನ ಂದಿದ್ದೆ ಅಂತ ಹೇಗೆ ಹೇಳಲು ಸಾಧ್ಯ?"

ರೇವತಿ ಗಂಭೀರವಾಗಿ "ನೀವು ಬಂದಿದ್ರಿ. ಯಾಕೆ ಅಂದರೆ ಆ ದಿನದ ದಿನಚರಿಯಲ್ಲಿ ಮೀನ ಇದನ್ನು ಬರೆದಿದ್ದಾಳೆ."

"ನನ್ನ ಕರ್ಮ ಮುಂದೆ ಹೇಳಿ"

ಮೀನ ಆ ದಿನ ನಿಮ್ಮನ್ನು ನೋಡಲು ತನ್ನ ಪ್ರೀತಿಯ ಬಗ್ಗೆ ಹೇಳಿಕೊಳ್ಳಲು ಮಾವಿನ ತೋಪಿಗೆ ಹೋಗುತ್ತಿದ್ದೇನೆ ಅಂತ ಕೊನೆಯದಾಗಿ ಬರೆದು ಡೈರಿ ಮುಗಿಸಿದ್ದಾಳೆ."

ಪ್ರಸನ್ನ "ಮೀನ ತನ್ನ ಪ್ರೇಮದ ಬಗ್ಗೆ ಹೇಳಿಕೊಳ್ಳಲು ಹಲವಾರು ಸಲ ಪ್ರಯತ್ನಿಸಿದ್ದಾಳೆ. ಆದರೆ ಮಾವಿನ ತೋಪಿನಲ್ಲಿ ಅವಳು ನನ್ನನ್ನು ಯಾವತ್ತು ಸಹ ಭೇಟಿ ಆಗಿಲ್ಲ."

"ಸತ್ತವಳು ಸುಳ್ಳೇಕೆ ಬರೆಯುತ್ತಾಳೆ?"

ಪ್ರಸನ್ನ ಕೋಪದಿಂದ "ಸತ್ತವಳು ಬರೆದಿರುವುದೆಲ್ಲಾ ನಿಜಾ ಅಂತ ನೀವೇಕೆ ಕುರುಡು ಕುರುಡಾಗಿ ನಂಬುತ್ತೀರಾ?"

"ಅಂದರೆ ನಿಮ್ಮ ಮಾತಿನ ಅರ್ಥ?"

ಪ್ರಸನ್ನ, ಆ ದಿನ ಮಾವಿನ ತೋಪಿನಲ್ಲಿ ನನ್ನನ್ನು ಭೇಟಿ ಮಾಡಲು ಹೊರಟಿರಬೇಕು. ಈ ಮಧ್ಯೆ ಬೇರೆ ಏನೋ ಯಾಕೆ ನಡೆದಿರ ಬಾರದು? ನೀವ್ಯಾಕೆ ನಂಬುತ್ತಿಲ್ಲ?"

ರೇವತಿ "ನಂಬಲು ಸಾಧ್ಯವಾಗುತ್ತಿಲ್ಲ"

"ಅದೇ ಯಾಕೆ ಅಂತ?"

"ಮೀನ ಸತ್ತಿದ್ದು ಎಲ್ಲಿ?"

"ಹುತ್ತದ ಹತ್ತಿರ"

"ಹುತ್ತ ಇರೋದು ಎಲ್ಲಿ ಅಂತ ಹೇಳುತ್ತೀರ?"

ಪ್ರಸನ್ನ ಈಗ ತಬ್ಬಿಬಾದನು.

ರೇವತಿ ಗಡುಸಾಗಿ "ಯಾಕೆ ಗಾಬರಿಯಾಗುತ್ತಿದ್ದೀರ. ಕಮಾನ್...... ಹೇಳಿ ಎಲ್ಲಿ...... ಹುತ್ತ ಇರೋದು ಈ ಮಾವಿನ ತೋಪಿನ ಪಕ್ಕದಲ್ಲೇ ತಾನೆ?" ಎಂದು ಅಬ್ಬರಿಸುತ್ತಾ ಕೇಳಿದಳು.

ಪ್ರಸನ್ನ ಅದೇಕೋ ಚಡಪಡಿಸುತ್ತಿದ್ದಾನೆ.

"ಸತ್ಯ ಕಹಿಯಾಗಿದೆ ಅಲ್ಲವೆ?"

"ಅದು ಹಾಗಲ್ಲ ರೇವತಿ"

ರೇವತಿ ಕೋಪದಿಂದ "ಮೀನ ನಿಮ್ಮನ್ನು ನೋಡಲು ಮಾವಿನ ತೋಪಿಗೆ ಬಂದಿದ್ದಾಳೆ. ಯಾವ ಕಾರಣದಿಂದಲೋ ಅವಳು ಮತ್ತು ಅವಳ ಪ್ರೀತಿ ಬೇಕಾಗಿರಲಿಲ್ಲ. ಅದಕ್ಕೆ ಹುತ್ತದ ಹತ್ತಿರ ಕರೆದುಕೊಂಡು ಹೋಗಿ ನಿಮ್ಮ ಬುದ್ಧಿವಂತಿಕೆಯಿಂದ ನಿಗೂಢ ರೀತಿಯಲ್ಲಿ ಕೊಲೆ ಮಾಡಿದ್ದೀರ?"

ಪ್ರಸನ್ನ ತಡಬಡಿಸಿ ಹೋದನು.

"ಅವಳನ್ನು ಹ್ಯಾಗೆ ಕೊಂದ್ರಿ?"

ಪ್ರಸನ್ನ ಗಾಬರಿ, ಆತಂಕದಿಂದ ಇಲ್ಲ..... ಇಲ್ಲ..... ನಾನು ಮೀನಳನ್ನು ಕೊಲೆ ಮಾಡಲಿಲ್ಲ. ನಾನು ಅವಳನ್ನು ನೋಡಲೇ ಇಲ್ಲ. ಪ್ಲೀಸ್ ಬಿಲೀವ್ ಮೀ"

ರೇವತಿ ಕೋಪದಿಂದ "ಸತ್ಯ ಕಣ್ಣಿನ ಎದುರಿಗೆ ಇರುವಾಗ ಕೊಲೆಗಾರನನ್ನು ಹೇಗೆ ನಂಬಲಿ?"

"ನೀನು ತಿಳಿದುಕೊಂಡಿರುವುದು ಸತ್ಯ ಅಲ್ಲ" ವ್ಯಂಗ್ಯವಾಗಿ "ನೀವು ಹೇಳ್ತಾ ಇರೋದು ಸತ್ಯವೆ?"

ಪ್ರಸನ್ನ ಮೆಲ್ಲಗೆ "ಸತ್ಯದ ಮುಖಕ್ಕೆ ಕಪ್ಪು ಪರದೆ ಬಿದ್ದಿದೆ. ಅದನ್ನು ತಾಳ್ಮೆಯಿಂದ ಸರಿಸಬೇಕು."

ರೇವತಿ ವ್ಯಂಗ್ಯವಾಗಿ "ಮಾತಿನಲ್ಲಿ, ಬುದ್ಧಿವಂತಿಕೆಯಲ್ಲಿ ನಿಮಗೆ ನೀವೇ ಸರಿ ಪ್ರಸನ್ನ. ಕಮಾನ್... ಹೇಳಿ ನನ್ನ ಗೆಳತಿಯನ್ನು ಯಾವ ರೀತಿ ಕೊಲೆ ಮಾಡಿದ್ರಿ?"

ಪ್ರಸನ್ನ ತೀಕ್ಷ್ಣವಾಗಿ ನೋಡಿದನು.

ರೇವತಿ, "ಹುತ್ತದಲ್ಲಿರುವ ಹಾವುಗಳೆಲ್ಲಾ ಬಂದು ನನ್ನ ಗೆಳತಿಯ ದೇಹಕ್ಕೆ ಸುತ್ತಿ ಕೊಂಡಿತ್ತು. ಇದು ಹೇಗೆ ಸಾಧ್ಯವಾಯಿತು? ಯಾವ ತಂತ್ರ ಉಪಯೋಗಿಸಿದ್ರಿ?"

ಪ್ರಸನ್ನ ಕೋಪದಿಂದ ನನ್ನ ಸಹನೆಯನ್ನು ಪರೀಕ್ಷೆ ಮಾಡಬೇಡ. ಮೀನಳ ಕೊಲೆಗೂ ನನಗೂ ಯಾವ ರೀತಿಯ ಸಂಬಂಧವೂ ಸಹ ಇಲ್ಲ.

ರೇವತಿ ವ್ಯಂಗ್ಯವಾಗಿ "ನಿಮ್ಮ ಬಗ್ಗೆ ಇಡೀ ಊರಿನ ಜನಗಳೇ ಅನುಮಾನದಿಂದ ನೋಡುತ್ತಿದ್ದಾರೆ."

ಇಲ್ಲಿಯವರೆಗೆ.........

ರೇವತಿ ಮೀನಳ ಡೈರಿಯನ್ನು ಓದುತ್ತಾಳೆ. ಅದರ ಪ್ರಕಾರ ಮೀನ ಪ್ರಸನ್ನನನ್ನು ಪ್ರೀತಿಸುತ್ತಿರುತ್ತಾಳೆ. ಸಾಯುವ ಕೆಲವು ಗಂಟೆಗಳ ಮೊದಲು ಪ್ರಸನ್ನನನ್ನು ನೋಡಲು ಅವಳು ಮಾವಿನ ತೋಪಿಗೆ ಹೋಗಿರುತ್ತಾಳೆ. ಈಗ ರೇವತಿ ಏಕಾಂತದಲ್ಲಿ ಪ್ರಸನ್ನನ ಜೊತೆ ಇದರ ಬಗ್ಗೆ ಸಂದೇಹ ವ್ಯಕ್ತಪಡಿಸುತ್ತಾಳೆ.

ಮುಂದೆ ಓದಿ..........



ಪ್ರಸನ್ನನ ಕೋಪ ಏರುತ್ತಿದೆ !

"ನಿಮ್ಮ ರಕ್ತ ಸಂಬಂಧಿಗಳ ಈಗಿನ ಮಾನಸಿಕ ಕಾಯಿಲೆಗೆ ಪರೋಕ್ಷವಾಗಿ ನೀವೇ ಕಾರಣರಾಗಿರುವಾಗ ಇನ್ನು ಮೀನಳನ್ನು ನೀವು ಸುಮ್ಮನೆ ಬಿಡಲು ಸಾಧ್ಯವೆ?

ಪ್ರಸನ್ನ ಕೋಪ ಆವೇಶದಿಂದ "ವಿಲ್ ಯೂ ಶಟ್ ಯುವರ್ ಮೌತ್ ಪ್ಲೀಸ್ ! ನನ್ನನ್ನು ನೀನು ಏನು ಅಂತ ತಿಳಿದು ಕೊಂಡಿದ್ದೀಯ. ನಾನು ನಿನ್ನನ್ನು ಇಷ್ಟ ಪಟ್ಟೆ ಅನ್ನೋ ಒಂದೇ ಒಂದು ಕಾರಣದಿಂದ ನೀನು ಏನೇ ಆಡಿದರು ಸಹಿಸಿಕೊಂಡಿದ್ದೆ. ನನ್ನನ್ನು ಈ ರೀತಿ ಅನುಮಾನಿಸುವ ಹೆಣ್ಣಿನ ಜೊತೆ ಬಾಳಲು ನನಗೆ ಇಷ್ಟ ಇಲ್ಲ. ನೀನು..... ಹೋಗಬಹುದು."

ರೇವತಿ ಕೋಪ, ಅವಮಾನದಿಂದ ಹೋಗುತ್ತೇನೆ, ಆದರೆ ಸುಮ್ಮನೆ ಅಲ್ಲ. ನಿಮ್ಮ ಗೋಮುಖ ವ್ಯಾಘ್ರತನವನ್ನು ಬಯಲು ಮಾಡಿ ನಂತರ ಹೋಗುತ್ತೇನೆ ಎಂದು ಅಲ್ಲಿಂದ ಬಿರುಬಿರನೆ ನಡೆದಳು.

ರೇವತಿ ತಿಳಿದಿರುವಂತೆ ಸತ್ಯ ಅಲ್ಲ ಸತ್ಯ ಕೆಲವು ಪದರಗಳ ಹಿಂದೆ ಅಡಗಿ ಸತ್ಯ ತಿಳಿಯಬೇಕಾದರೆ ಪದರ ಸರಿಯಬೇಕು ! ಅದು ಈಗ ಅಸಾಧ್ಯ !

ಸತ್ಯವನ್ನು ಮತ್ತಷ್ಟು ಕಂದ ತಳ್ಳುವಂತಹ ನಿಗೂಢಮಯ ಘಟನೆ ನಡೆಯುವುದರಲ್ಲಿತ್ತು.

(ಮುಂದುವರೆಯುತ್ತ

## ಧರ್ಮ

ಧರ್ಮ ಎಂಬುದು ನಮ್ಮ ಜೀವನದ ರೀತಿ. ಒಬ್ಬರನೊಬ್ಬರು ಅರಿತು ಜೀವಿಸುವುದೇ ಧರ್ಮ. ಅರಿವು ಮೂಡುವುದು ಕರ್ಮದಿಂದ. ಕರ್ಮ ನಮ್ಮ ದೈನಂದಿನ ಕಾರ್ಯ. ಇದಕ್ಕೆ ಕಾರಣ ನಮ್ಮ ಮನಸ್ಸು, ದೇಹ, ಆಹಾರ. ದೇಹಕ್ಕೆ ಆಹಾರ ಸೇವನೆ ಮುಖ್ಯ. ಆಹಾರ ಸೇವನೆಯ ಫಲ ಮನಸ್ಸು. ಮನಸ್ಸು ಒಳ್ಳೆಯದಿದ್ದರೆ ಯೋಚನೆಯೂ ಒಳ್ಳೇದಾಗುವುದು

ನಮಗೆ ನಾವು ಒಳ್ಳೆಯವರಾಗಬೇಕಾದರೆ ಮುಖ್ಯವಾಗಿ ಮೂರು ಧರ್ಮಗಳನ್ನು ಅನುಸರಿಸಬೇಕು. 1. ಕುಲಧರ್ಮ : ಕುಲಧರ್ಮವೆಂದರೇನು? ಪೂರ್ವಿಕರು ಇಲ್ಲದೆ ನಾವು ಹುಟ್ಟುವುದಿಲ್ಲ. ನಮ್ಮ ಹುಟ್ಟಿಗೆ ಆಧಾರ ಪೂರ್ವಿಕರು. ಅವರ ವಿಚಾರದಲ್ಲಿ ನಮ್ಮ ಕರ್ತವ್ಯ ಇದೆ. ಅವರನ್ನು ನೆನಯಬೇಕು. ಅವರು ಮಾಡಿದ ಒಳ್ಳೆಯ ಸೇವೆಯನ್ನು ಮುಂದುವರಿಸಬೇಕು. ಕುಲದ ಉದ್ಧಾರಕ್ಕೆ ನಾವೆಲ್ಲ ಹೆಣಗಬೇಕು. ಕುಲದೇವತೆಯನ್ನು ಎಂದೂ ಮರೆಯಬಾರದು. 2. ಸಮಾಜ ಧರ್ಮ : ವ್ಯಕ್ತಿ ಸಮಾಜವಲ್ಲ. ವ್ಯಕ್ತಿಗಳು ಸಮಾಜ. ಸಮಾಜ ಧರ್ಮ ಪ್ರೀತಿಯ ಧರ್ಮ, ಪ್ರೀತಿಯೆ ಧರ್ಮ, ತ್ಯಾಗದ ಧರ್ಮ. ಸಹಬಾಳ್ವೆಯ ಧರ್ಮ. ಇದರ ಸೂತ್ರ ಸಹಕಾರ ಸೂತ್ರ ಬದುಕಬೇಕು. ಬದುಕಿಸಬೇಕು. ಅಹಂಕಾರವನ್ನು ಬಿಡುವುದು ಸಮಾಜಧರ್ಮ, ಸಮಾಜವೆಂದರೆ ಸ್ತ್ರೀ, ಪುರುಷರ, ಮಕ್ಕಳ ಸಂಗಮ. ಸ್ತ್ರೀ ಮನೆಯ ದೀಪ. ಅದು ಆರದಂತೆ, ನಿತ್ಯ ಜ್ಯೋತಿ ಇರುವಂತೆ ಕಾಪಾಡುವುದು ಸಮಾಜ ಧರ್ಮ. ಸ್ತ್ರೀಯರು ಕಣ್ಣೀರಿಡುವ ಸಮಾಜ ಸಮಾಜವಲ್ಲ. ಅದೊಂದು ಜೀವದ ಸಮಾಧಿ. 3. ರಾಷ್ಟ್ರ ಧರ್ಮ : ಅನೇಕ ಸಮಾಜ, ಅನೇಕ ಕುಲ ಸೇರಿದರೆ ಅದೊಂದು ರಾಷ್ಟ್ರ. ಇಲ್ಲಿ ಹೊಣೆಗಾರಿಕೆಯೇ ಧರ್ಮ. ರಾಷ್ಟ್ರ ನಮ್ಮಿಂದ ನಿರೀಕ್ಷಿಸುವುದು ಸೇವೆ. ಜನ ಸೇವೆಯೇ ರಾಷ್ಟ್ರ ಸೇವೆ. ರಾಷ್ಟ್ರಸೇವೆಗೆ ತಯಾರಿಕೆ ಮಾತೆಯಿಂದಲೇ ಆರಂಭ. ಜನನೀ ಜನ್ಮಭೂಮಿ. ಅದೇ ನಮ್ಮ ರಾಷ್ಟ್ರ. ಅದರ ಉನ್ನತಿಗೆ, ಅದರ ಹೆಸರಿಗೆ ಕುಂದುಬಾರದೆ ಶ್ರಮಿಸುವ ಪ್ರಜೆಗಳೇ ರಾಷ್ಟ್ರಕ್ಕೆ ಭೂಷಣ.

ಯಾರು ಯಾವ ದೇಶದಲ್ಲಿ ಹುಟ್ಟಲ್ಲಿ, ಅವರು ತನ್ನ ಹುಟ್ಟು ಭೂಮಿಗೆ ಕುಲ ಧರ್ಮ, ಸಮಾಜ ಧರ್ಮ, ರಾಷ್ಟ್ರ ಧರ್ಮವನ್ನು ಸಲ್ಲಿಸಲೇಬೇಕು. ಆ ಧರ್ಮವೇ ಪ್ರೇಮ ಧರ್ಮ. ಇನ್ನೊಬ್ಬರಿಗೆ ಕೇಡು ಬಯಸದಿರುವುದೇ ಧರ್ಮ. ಅಹಂಕಾರವನ್ನು ಬಿಟ್ಟು, ಮಾನಸಿಕವಾಗಿ ಎಚ್ಚರದಿಂದಿರ ಬೇಕು. ಅದೇ ಪುರುಷಾರ್ಥ

**ಚೇಂದ್ರಿಮಾಡ. ಗ. ಮುತ್ತಪ್ಪ, ಕುಶಾಲನಗರ**

## ನಗೆಹನಿ

ಮಾಸ್ಟ್ರ : ಯಾಕೇರ ಸ್ಕೂಲಿಗೆ ಬಾಕಾನ ಹೊತ್ತಾತ್?
ಹೈದ : ಬಸ್ಸಲ್ಲಿ ಬಾಕಾನ ಹೊತ್ತಾತ್ ಸಾರ್.
ಮಾಸ್ಟ್ರ : ಯಾಕೇರ ಬಸ್ಸಲ್ಲಿ ಬಾಕಾನ ಹೊತ್ತಾತ್?
ಹೈದ : ಬಸ್‌ನ ಡ್ರೈವರ್‌ವುಟ್ಟಲ್ಲ ಅಂವ ಮಧ್ಯದಾರೀ ಭೇದಿ ಮಾಡಿಕಂಡ್ ಇದ್ದತ್ ಸಾರ್.

**ಕೋಳು ಮುಡಿಯನ ಮಿಲನ್ ಕುಮಾ**
**ಗಾಳಿಬೀ**

* * *

ಹೈದ : ನಿನ್ನ ಪ್ರೀತಿಸುವ ಸುರುನ ಹೈದ ನಾನೇನ್?
ಗೂಡೆ : ಹೌದು, ಬಾಕಿಯವು ಸ್ವಲ್ಪ ವಯಸ್ಸಾದವು.

* * *

ಒಂದ್ ತಮಾಸೆ. ಸಭೆಲಿ ಒಬ್ಬ ಜೋಕ್ ಹೇಳ್ತಿತ್. ಸಭೆಲಿದ್ದವೆಲ್ಲವು ಬಿದ್ದ್ ಬಿದ್ದ್ ನೆಗಾಡ್ತಿದ್ದೊ. ಆದ್ರೆ ಒ ಮಾತ್ರ ಸುಮ್ಮನೆ ಕುದ್ದಿತ್ತ್. ಅವನ ಜೊತೆಲಿ ಮತ್ತೊ ಕುದ್ದಿದ್ದಂವ ಕೇಳ್ತ್... ಅಲ್ಲಾ..... ಎಲ್ಲವು ನೆಗಾಡ್ಕ ನೀನೊಬ್ಬನೆ ಯಾಕೆ ಸುಮ್ಮನೆ ಕುದ್ದೊಳ? ಅದ್ಕೆ ಅಂ ಹೇಳ್ತ್. ನಂಗೆ ಅವಂಗೆ ಆದುಲೆ, ಮನೆಗೋಗಿ ನೆಗಾಡ್ನೆತ.

**ಮಳ್ಳನ ಎಸ್. ವಸಂತ, ಮಕ್ಕಂದೂರು**

* * *

ಕನ್ನಡದವಳು ಒಬ್ಬು ಸಂತೆಗೆ ಬಂದ್ ಸಾಮಾನ ಮಾಡ್ತಾ ಇದ್ದದೆ. ಅಷ್ಟೊತ್ತಿಗೆ ಇಂಗ್ಲೀಷ್‌ನವಳೊಬ್ಬು ಅಲ್ಲಿ ಬಂದದೆ. ಬಂದ್ ವಾಟ್ ಈಸ್ ಯುವರ್ ನೇಮ್‌ತ ಕೇಳ್ದೆ ಕನ್ನಡದವಳು ಇವಳಿಗೆ ಸ್ವಲ್ಪ ಕಮ್ಮಿಂತ ಗ್ಯಾನ ಮಾಡಿ ಸುಟ್ಟ ಬೇವರ್ಸಿ ಇಂಗ್ಲೀಷ್ ಬೈದಿಯಾ ನಂಗೆತ ಕೇಳ್ದೆ.

ಸ್ವಲ್ಪ ಹೊತ್ತು ಕಳ್ದ್ ಮ್ಯಾಲೆ ಇಂಗ್ಲೀಷ್‌ನವಳಿಗೆ ಬಸ್ ಬಂದ್ ಬುಟ್ಟದೆ. ಆಗ ಅವಳು ಇವಳ ಹೆಸ್ರ್ ಬೇವರ್ಸಿಂತ ಗ್ಯಾನ ಮಾಡಿ ಬಾಯ್ ಬೇವರ್ಸಿಂತ ಹೇಳ್ದೆ. ಕನ್ನಡದವಳಿಗೆ ಏನ್ ಮಾಡಕೂಂತ ಗೊತ್ತಾಗದೆ ಸೀದಾ ಹೋದೆ.

**ಯು. ಎಸ್. ಬೀನ, ಆವಂದೂರು ಗ್ರಾಮ**

# ಣ್ಣಕಥೆ : ಚಿನ್ನದ ಪಂಜರ

ನನ್ನ ಪ್ರಾಥಮಿಕ ಶಿಕ್ಷಣಕ್ಕೆ ಮೊದಲು ಪೂರ್ವ ಪ್ರಾಥಮಿಕ ಣವು ಅನೌಪಚಾರಿಕವಾಗಿ 5 ತಿಂಗಳು ನನ್ನ ಮಾವನ ಮನೆಯಲ್ಲಿ ಜ್ಜಿಯ (ತಾಯಿಯ ತಾಯಿ) ಮೂಲಕ ನಡೆಯಿತು. ನಾನು ಇಲ್ಲಿ ಜ್ಜಿ ಮನೆಗೆ ಬಂದುದೆ ಒಂದು ಆಕಸ್ಮಿಕ. ತಾಯಿ ನೀನು ಜ್ಜಿಮನೆಯಿಂದ ಶಾಲೆಗೆ ಹೋಗು ಎಂದು ಹೇಳಿ ಒಪ್ಪಿಸಲು ಯತ್ನಿಸಿದ್ದರೂ ನಾನು ಅದಕ್ಕೆ ಒಪ್ಪಿರಲ್ಲಿಲ್ಲ. ಒಮ್ಮೆ ತಾಯಿ ಅಜ್ಜಿ ನೆಗೆ ಹೋಗಿಬರುವ ಎಂದಿದ್ದರು. ನಾನೇನೂ ಹೋಗಿ ಬರುವುದು ನೇ ಎಂದು ಸಡಗರದಿಂದ ಹೊರಟಿದ್ದೆ. ಆದರೆ ನಂತರ ನಡೆದದ್ದೇ ರೆ. ಅಜ್ಜಿ ಮನೆಗೆ ಹೋದ ಮಾರನೆಗೆ ತಾಯಿ ನೀನು ಇಲ್ಲೇ ಡಿಕೊಂಡಿರು ಆಸ್ಪತ್ರೆಗೆ ಹೋಗಿ ಅದ್ಯಾರನ್ನೊ ನೋಡಿಕೊಂಡು ರುತ್ತೇನೆಂದು ಮಾವನೊಂದಿಗೆ ಹೊರಟರು. ನಾನು ಬರುತ್ತೇನೆ ದುದಕ್ಕೆ ಆಸ್ಪತ್ರೆಗೆ ಮಕ್ಕಳು ಬಂದರೆ ಅಲ್ಲಿ ನರ್ಸ್ ಇಂಜೆಕ್ಷನ್ ಚುಚ್ಚುತ್ತಾರೆ ಎಂದು ಹೆದರಿಸಿದರು. ಸರಿ ಬೇಗ ಬಂದು ಬಿಡಬೇಕೆಂದು ಳಿ ತಾಯಿಯನ್ನು ಬೀಳ್ಕೊಟ್ಟೆ. ಆದರೆ ಸಂಜೆ ಮಾವ ಮಾತ್ರ ಮನೆಗೆ ಂತುರುಗಿದಾಗ ತಾಯಿಯ ಬಗ್ಗೆ ಕೇಳಿದ್ದಕ್ಕೆ ಆಸ್ಪತ್ರೆಯಲ್ಲಿ ಇರುವ ರೋಗಿಯ ಜೊತೆಗೆ ಯಾರೂ ಇರಲಿಲ್ಲ ಅದಕ್ಕೆ ಅಲ್ಲೇ ುತಿರುವುದಾಗಿಯೂ ನಾಳೆ ಬೆಳಿಗ್ಗೆ ಬಂದುಬಿಡುವರೆಂದರು. ಆದರೆ ಮಾರನೆಯ ದಿನವೂ ತಾಯಿ ಬರದಾಗ ನಾನು ಮಂಕಾದೆ. ಹೀಗೆ ಂದು ವಾರ ಕಳೆಯಿತು ಅಜ್ಜಿ ಅಕ್ಷರ ತಿದ್ದುಸುವುದು, ಬಾಯಿಪಾಠ ಹೇಳಿಸುವುದು ಪ್ರಾರಂಭವಾಯಿತು. ಆಗಲೇ ನಾನು ಮೋಸ ಹೋಗಿರುವುದು ಮನವರಿಕೆ ಆಯಿತು. ಅಂತೂ ನನ್ನನ್ನೂ ಚಿನ್ನದ ಪಂಜರದಲ್ಲಿ ಕೂಡಿಬಿಟ್ಟಿದ್ದರು.

ಅಜ್ಜಿ ನನಗೆ ಅಕ್ಷರ ಮಾಲೆ, ಸಂಖ್ಯೆ, ಮಗ್ಗಿ, ವಾರ, ತಿಂಗಳು ಇವುಗಳನ್ನು ಕಲಿಸುತ್ತಿದ್ದರು. ಅತ್ತೆ ಕಾರ್ಡ್ ಬೋರ್ಡ್ ನಲ್ಲಿ ದಪ್ಪ ಅಕ್ಷರದಲ್ಲಿ ಅಕ್ಷರಮಾಲೆಯನ್ನು ಬರೆದು ಸುಂದರವಾಗಿ ಬಣ್ಣಹಚ್ಚಿ ಕೊಟ್ಟಿದ್ದರು. ಓದಲು ಬರೆಯಲು ಚಾಪೆಹಾಸಿ ಕುಳಿತುಕೊಳ್ಳ ಬೇಕಾಗಿತ್ತು. ಅಜ್ಜಿ ಪಕ್ಕದಲ್ಲೆ ಕುಳಿತಿರುತ್ತಿದ್ದಳು. ಬಾಯಿಪಾಠ ಹೇಳುವಾಗ ಮಗ್ಗಿ ತಪ್ಪಿದರೆ ನನ್ನ ತೊಡೆಯ ಮೇಲೆ ಈಗಿನ ಕಾಂಗ್ರೆಸ್ ಪಕ್ಷದ ಚಿನ್ಹೆಯಾದ ಹಸ್ತ ಮೂಡುತಿತ್ತು. ವರ್ಣ ಮಾಲೆ ಬರೆದು ಅಜ್ಜಿಗೆ ತೋರಿಸಿದಾಗ ತಪ್ಪಿದ್ದರೆ ಅದೇ ಸ್ಲೇಟಿನ ಮೂಲೆಯಿಂದ ತಲೆಗೆ ಚಚ್ಚುತ್ತಿದ್ದರು. ಆಗೆಲ್ಲಾ ತಲೆ ತೂತು ಆಗಿ ರಕ್ತಸೋರಿ ಕೆನ್ನಗೆ ಇಳಿದದ್ದೂ ಉಂಟು. ಆಗ ಅತ್ತೆ ಬಂದು ರಕ್ತ ಒರೆಸಿ ಗಾಯಕ್ಕೆ ಮದ್ದು ಹಾಕಿ ಉಪಚರಿಸುತ್ತಿದ್ದರು. ಅತ್ತೆ ನನ್ನನ್ನು ಉಪಚರಿಸುತ್ತಾ ಬೇರೆಯವರ ಮಕ್ಕಳನ್ನು ತಂದು ಕೊಂದು ಹಾಕಿಬಿಡಬೇಡಿ ಎಂದು ಅಜ್ಜಿಗೆ ಬಯ್ಯುತ್ತಿದ್ದರು. ಅದರೂ ಅಜ್ಜಿಗೆ ಕೇಳಿಸುವಷ್ಟು ಜೋರಾಗಿ ಬಯ್ಯಲು ಅತ್ತೆಗೆ ಧೈರ್ಯ ಇರಲಿಲ್ಲ.

ಈಗ ನಾನು ನನ್ನ ಪೂರ್ವ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ಅಜ್ಜಿಮನೆಯಿಂದ 3 ಕಿಲೋಮೀಟರ್ ದೂರದಲ್ಲಿದ್ದ ಸರಕಾರಿ ಶಾಲೆಗೆ ಸೇರಿದ್ದೆ. ದಿನಾಲು ಬೆಳಿಗ್ಗೆ ರಾಮ ಬಸ್‌ನಲ್ಲಿ ಶಾಲೆಗೆ ಹೋಗಿ ಅದೇ ಬಸ್‌ನಲ್ಲಿ ಶಾಲೆಯಿಂದ ಮನೆಗೆ ಬರುತ್ತಿದ್ದೆ. ಒಮ್ಮೆಮ್ಮೆ ಬಸ್ ನಾಳೆ ಬರುವುದಿಲ್ಲ ರಿಪೇರಿಗೆ ಹೋಗುತ್ತದೆ ಎಂದು ಮೊದಲೇ ತಿಳಿದಿದ್ದರೆ, ಮಾವ ಜೀಪ್‌ನಲ್ಲಿ ಶಾಲೆಗೆ ಬಿಟ್ಟು ಮತ್ತೆ ಸಂಜೆ ಬಂದು ಕರೆದುಕೊಂಡು ಹೋಗುತ್ತಿದ್ದರು. ಬಸ್ ಹತ್ತಿ ಅಲ್ಲಿ ಡ್ರೈವರ್ ಮತ್ತು ಏಜೆಂಟರಿಗೆ Good Morning ಹೇಳಬೇಕೆಂದು ಮಾವನ ಅಣತಿಯಾಗಿತ್ತು. ನಾನು ಬಸ್ ಎಷ್ಟೇ ತುಂಬಿದ್ದರೂ ಹಿಂದುಗಡೆಯ ಬಾಗಿಲಿನಿಂದ ಹತ್ತಿ ಮೊದಲು ಏಜೆಂಟರಿಗೆ Good Morning ಹೇಳಿ ನಂತರ ರಶ್‌ನಲ್ಲಿ ನುಸುಳಿಕೊಂಡು ಹೋಗಿ ಡ್ರೈವರ್‌ಗೆ Good Morning ಹೇಳುತ್ತಿದ್ದೆ. ಇದು ಬಸ್‌ನಲ್ಲಿ ನನ್ನ ನಿತ್ಯದ ಹವ್ಯಾಸವಾಗಿತ್ತು. ಕೆಲವೊಮ್ಮೆ ಹೊಸಬ ಏಜೆಂಟ್ ಅಥವಾ ಡ್ರೈವರ್ ಬಂದದು ಅವರಿಗೆ ಯಾರಪ್ಪ ಈ Good Morning ಅನಿಸಿದ್ದಿರಬಹುದು. 15 ವರ್ಷದ ನಂತರ ಒಮ್ಮೆ ಅದೇ ಬಸ್‌ನಲ್ಲಿ ಮಾವನಲ್ಲಿಗೆ ಹೋಗುತ್ತಿದ್ದಾಗ ಅಜ್ಜ ಏಜೆಂಟ್ ನನ್ನ ಗುರುತು ಹಿಡಿದು ಏನು Good Morning ಚೆನ್ನಾಗಿದ್ದೀಯಾ ಎಂದು ಮಾತನಾಡಿಸಿದ. ಆಗೆಲ್ಲಾ ನನ್ನ ಹೆಸರು Good Morning ಎಂದೇ ಆಗಿತ್ತು. ಆಗೊಮ್ಮೆ ಈಗೊಮ್ಮೆ ರಾಮ ಬಸ್ ನನಗೆ ಕೈ ಕೊಡುತ್ತಿತ್ತು. ಆದೇಷ್ಟೊ ಸಲ ತುಂಬಿ ಬರುತ್ತಿದ್ದ ಬಸ್‌ಗೆ ಹತ್ತಲಾಗದೆ ನಡೆದೇ ಶಾಲೆಗೆ ಹೋಗುತ್ತಿದ್ದೆ. ಒಮ್ಮೆ ಬಸ್ ಬರುವುದು ತುಂಬಾ ತಡವಾಗಿತ್ತು. ಬಂದ ಬಸ್ ತುಂಬಾ ರಶ್ ಇತ್ತು. ನನಗೆ ಬಸ್ ಹತ್ತಲಾಗಲಿಲ್ಲ. ನಂತರ 4-5 ಹುಡುಗರೊಂದಿಗೆ ನಡೆದೇ ಶಾಲೆಗೆ ಹೊರಟೆ. ಆದರೆ ಶಾಲೆ ತಲುಪುವಾಗ ಶಾಲೆ ಸೇರಿ ಪಾಠ ನಡೆಯುತ್ತಿತ್ತು ನಾನಾಗ ಎರಡನೇ ತರಗತಿಯಲ್ಲಿ ಓದುತ್ತಿದ್ದೆ. ಅಲ್ಲಿವರೆಗೂ ಎಂದೂ ನಾನು ಶಾಲೆಗೆ ತಡವಾಗಿ ಹೋದದ್ದಿಲ್ಲ. ಈಗ ಶಾಲೆಗೆ ಹೋದರೆ ಕ್ಲಾಸ್ ಟೀಚರ್ ಹೆಡ್‌ಮಾಸ್ಟ್ರ ಹತ್ತಿರ ಕಳಿಸುತ್ತಾರೆ. ಅಯ್ಯೊ ಹೆಡ್‌ಮಾಸ್ಟ್ರ ನಾಗರ ಬೆತ್ತ ನೆನೆದಾಗಲೇ ಮೈ ಎಲ್ಲಾ ನಡುಕ ಬಂದಿತು. ಶಾಲೆಗೆ ಹೋಗುವುದು ಬೇಡ ತಿರುಗಿ ಮನೆಗೆ ಹೋಗಿ ನಾಳೆ ರಜೆ ಚೀಟಿ ಬರೆಸಿಕೊಂಡು ಬರುವುದು ಸರಿಯೆಂದು ನನ್ನ ಜೊತೆ ಹುಡುಗರ ಅಭಿಪ್ರಾಯವಾಗಿತ್ತು. ನನಗೂ ಅದು ಸರಿಕಂಡಿತು. ಅವರು ಇಲ್ಲೇ ಹತ್ತಿರದ ದಾರಿ ಇದೆ ಎಂದು ಕರೆದುಕೊಂಡು ಹೊರಟರು. ಅದು ಒಂದು ಕಾಫಿ ತೋಟದ ಒಳಗೆ ಹೋಗಬೇಕಾಗಿತ್ತು. ತೋಟದ ಒಳಗೆ ಸ್ವಲ್ಪದೂರ ಹೋಗುವಷ್ಟರಲ್ಲಿ ಪಕ್ಕದ ತೋಟದ ಕೆಲಸದವರ ಲೈನ್ ಮನೆಯಿಂದ ಒಂದು ನಾಯಿ ನಮ್ಮ ಮೇಲೆ ಬಿಳಲು ಬಂದಿತು. ನನ್ನ ಜೊತೆಯವರೆಲ್ಲಾ ಚಿಲ್ಲಾಪಿಲ್ಲಿಯಾಗಿ ಎತ್ತೆತ್ತಲೋ ಓಡಿದರು. ನಾನೂ ಬಂದ ದಾರಿಯಲ್ಲೆ ಹಿಂದಕ್ಕೆ ಓಡಿದೆ. ಮತ್ತೆ ದಾರಿ ತಪ್ಪಿ ಎಲ್ಲೆಲ್ಲೊ ಅಲೆದೆ ನನಗೆ ನನ್ನ ಸಂಗಡಿಗರು ಸಿಗಲೇ ಇಲ್ಲ. ನನಗೆ ಆ ಹೊಸದಾರಿ ಬೇರೆ ಗೊತ್ತಿರಲಿಲ್ಲ. ಅಲ್ಲೆ ಅಲೆದಾಡುತ್ತಿರುವಾಗ ತೋಟದ ರೈಟರ್ ಕಂಡು ಅಷ್ಟುದೂರ ಕರೆದುಕೊಂಡು ಬಂದು ಮನೆಗೆ ದಾರಿ ತೋರಿಸಿದ. ಮನೆಗೆ ತಲುಪುವುದರಲ್ಲಿ ಮಧ್ಯಾಹ್ನ ಆಗಿತ್ತು ಅಜ್ಜಿ ಊಟ ಮಾಡುತ್ತಿದ್ದರು. ಏನು ಶಾಲೆಗೆ ರಜವಾ ಎಂದು ಕೇಳಿದರು. ಇಲ್ಲಿ ಬಸ್ ಸಿಗಲಿಲ್ಲ ನಡೆದು ಶಾಲೆ ತಲುಪುವಾಗ ಶಾಲೆ ಘಂಟೆ ಆಗಿತ್ತು ಹಿಂದಕ್ಕೆ ಬಂದೆ ಎಂದೆ. ಊಟಮಾಡುತ್ತಿದ್ದ ಕೈಯಲ್ಲೇ ಬೆನ್ನಿಗೆ ಒಂದು ಗುದ್ದಿದರು

ಕೈ ತೊಳೆದುಕೊಂಡು ಬರುತ್ತೇನೆ ಎಂದು ಹೋದರು. ಅತ್ತೆ ಓಡು ಓಡು ಅಜ್ಜಿ ಬಂದರೆ ಈಗ ನಿನ್ನನ್ನು ಬಿಡುವುದಿಲ್ಲ ಎಂದರು ನಾನು ಓಡಬೇಕೆಂದಿದ್ದೆ ಆದರೆ ಕಾಲು ಭೂಮಿಯಿಂದ ಕಿತ್ತು ಬರುತ್ತಿರಲಿಲ್ಲ ಓಡಲು ಪ್ರಯತ್ನಿಸಿದೆ ಸಾಧ್ಯವಾಗಲಿಲ್ಲ. ಓಡಲಿಲ್ಲವೆಂದಲ್ಲ ಮನೆಯಿಂದ ಹೊರಗೆ ಅಂಗಳಕ್ಕೆ ಬಂದಿದ್ದೆ. ಅಜ್ಜಿ ಬಂದರು ತಲೆಗೊಂದು ಬಲವಾದ ಪೆಟ್ಟುಕೊಟ್ಟರು. ನಾನು ಮುಗ್ಗರಿಸಿ ಭೂಮಿ ಮೇಲೆ ಬಿದ್ದಿದ್ದೆ. ಕಣ್ಣು ಬಿಟ್ಟು ನೋಡಿದರೆ ಮನೆ ಓಲಾಡಿದಂತೆ ಅನಿಸುತಿತ್ತು. ಭೂಮಿ ಓರೆಯಾಗಿ ನಾನು ಇಳಿ ಜಾರಿನಲ್ಲಿ ಉರುಳಿತ್ತಿರುವಂತೆ ಅನಿಸುತ್ತಿತ್ತು. ಅತ್ತೆ ಬಂದು ಎತ್ತಿಕೊಂಡು ಹೋಗಿ ಮಂಚದ ಮೇಲೆ ಮಲಗಿಸಿದರು. ಆಗ ಅತ್ತೆ ಜೊತೆಯಲ್ಲಿ ನನ್ನನ್ನು ತಾಯಿಯ ಹತ್ತಿರ ಕಳುಹಿಸಿಬಿಡಿ ನಾನು ಅಲ್ಲಿಂದಲೆ ಶಾಲೆಗೆ ಹೋಗುತ್ತೇನೆ ಅಂದೆ. ಹೀಗೆ ಅತ್ತೆ ಜೊತೆಯಲ್ಲಿ ಅದೆಷ್ಟೋ ಬಾರಿ ಹೇಳಿಕೊಂಡಿದ್ದೆ. ಅವರೂ ಮಾವನ ಜೊತೆಯಲ್ಲಿ ಸಣ್ಣ ಮಕ್ಕಳಿಗೆ ಹೀಗೆಲ್ಲಾ ಸಿಕ್ಕಾಬಟ್ಟೆ ಹೊಡೆಯುವುದು ಸರಿಯಲ್ಲಾ ಅವನನ್ನು ಅವರಮ್ಮನ ಮನೆಗೆ ಕಳುಹಿಸಿಬಿಡುವ ಎನ್ನುತ್ತಿದ್ದರು. ಆದರೆ ಅವ್ವನ ಹತ್ತಿರ ಈ ಮಾತು ನಡೆಯುತ್ತಿರಲಿಲ್ಲ. ತಾಯಿ ಮಧ್ಯೆ ಮಧ್ಯೆ ನನ್ನನ್ನು ನೋಡಲು ಬಂದಾಗ ಅವರನ್ನು ಕಂಡೊಡನೆ ಜೋರಾಗಿ ಅತ್ತು ಬಿಡುತ್ತಿದ್ದೆ. ನನ್ನನ್ನು ಇಲ್ಲಿ ಬಿಡಬೇಡ ನಿನ್ನ ಜೊತೆ ಮನೆಗೆ ಕರೆದುಕೊಂಡು ಹೋಗು ನಾನು ಅಲ್ಲೆ ಶಾಲೆಗೆ ಹೋಗುತ್ತೇನೆ, ಇಲ್ಲಿ ಓದುವುದಕ್ಕಿಂತ ಚೆನ್ನಾಗಿ ಓದುತ್ತೇನೆ. ಹೊಸ ಬಟ್ಟೆಯಾಗಲಿ ತಿಂಡಿಯಾಗಲಿ ಎಂತದ್ದೂ ಕೇಳುವುದಿಲ್ಲ ಎನ್ನುತ್ತಿದ್ದೆ. ತಾಯಿ ನನ್ನನ್ನು ಯಾರೂ ಕಾಣದಲ್ಲಿಗೆ ಕರೆದುಕೊಂಡು ಹೋಗಿ ತಬ್ಬಿಕೊಂಡು ಅಳುತ್ತಿದ್ದಳು. ಆಗ ತಾಯಿಗೆ ನನ್ನ ಮೇಲೆ ಪ್ರೀತಿ ಇದೆ ಆದರೂ ಯಾಕೆ ನನ್ನನ್ನು ಅಜ್ಜಿಮನೆಯಲ್ಲೇ ಬಿಟ್ಟು ಹೋಗುತ್ತಾರೆ ಎಂದು ಅರ್ಥವಾಗುತ್ತಿರಲಿಲ್ಲ. ನಾನು ಶಾಲೆಗೆ ಹೊರಡುವಾಗ ನೀನು ಶಾಲೆಗೆ ಹೋಗಿ ಬಾ. ನಾನು ಇಂದು ಇರುತ್ತೇನೆ ಎನ್ನುತ್ತಿದ್ದರು. ನಾನು ಶಾಲೆಬಿಟ್ಟು ಬಸ್ ಇಳಿದು ಓಡೋಡಿ ಬರುವಾಗ ಬಿದ್ದು ಮಂಡಿ ಮೊಣಕೈ ತರಚಿಕೊಂಡು ಬಂದರೆ ತಾಯಿ ಊರಿಗೆ ಹೋಗಿ ಬಿಟ್ಟಿರುತ್ತಿದ್ದರು. ನನಗೆ ಕೈಕಾಲು ತರಚಿ ಕೊಂಡದ್ದು ಗಾಯ. ಎಷ್ಟೇ ತೀವ್ರವಾಗಿದ್ದರೂ ನೋಯುತ್ತಿರಲಿಲ್ಲ. ತಾಯಿ ನನ್ನನ್ನು ಬಿಟ್ಟು ಹೋದ ದುಃಖ ತಡೆಯಲಾಗುತ್ತಿರಲಿಲ್ಲ. ಬಚ್ಚಲ ಮನೆಗೆ ಹೋಗಿ ಬಾಗಿಲು ಹಾಕಿಕೊಂಡು ಜೋರಾಗಿ ಅಳುತ್ತಿದ್ದೆ. ಅತ್ತಿದ್ದು ಅವ್ವನಿಗೆ ಗೊತ್ತಾದರೆ ಮತ್ತೆ ಏಟು ಬಿಳುತ್ತಿತ್ತು ಆದುದರಿಂದ ನಾನು ದುಃಖವನ್ನು ತಡೆದುಕೊಂಡು ಮುಖ ತೊಳೆದು ಟವಲ್‌ನಲ್ಲಿ ಒರೆಸಿಕೊಂಡು ಬಚ್ಚಲ ಮನೆಯಿಂದ ಹೊರಬರುತ್ತಿದ್ದೆ. ಮತ್ತೆ ತಾಯಿಯ ನೆನಪಾಗಿ ಅತ್ತುಬಿಡುತ್ತಿದ್ದೆ. ಮತ್ತೆ ಬಚ್ಚಲಿಗೆ ಹೋಗಿ ಟವಲ್‌ನಲ್ಲಿ ಮುಖ ಮುಚ್ಚಿಕೊಂಡು ನಾಲ್ಕೈದು ಸಾರಿ ಅತ್ತು ನಿಲ್ಲಿಸಿ ಅತ್ತು ನಿಲ್ಲಿಸಿ ಮುಖ ಒರೆಸಿಕೊಳ್ಳುತ್ತಿದ್ದೆ. ಹೀಗೆ ಎಷ್ಟು ಹೊತ್ತಾದರೂ ಬಚ್ಚಲಿಂದ ಈಚೆ ಬಾರದಿದ್ದು ಕಂಡು ಅಜ್ಜಿ ಬಂದು ದರ ದರ ಎಳೆದುಕೊಂಡು ಹೋಗಿ ಕಾಫಿ ತಿಂಡಿ ಕೊಡುತ್ತಿದ್ದರು. ಆಗ ನನಗೆ ಈ ತಿಂಡಿಯ ಬದಲು ವಿಷ ಕೊಟ್ಟಿದ್ದರೆ ತಿಂದು ಸತ್ತುಹೋಗುತ್ತಿದ್ದೆ ಎನಿಸುತ್ತಿತ್ತು. ನಾನು ಎಷ್ಟೊ ಬಾರಿ ಸತ್ತು ಹೋಗಬೇಕು ಎಂದುಕೊಳ್ಳುತ್ತಿದ್ದೆ ಆದರೆ ಹೇಗೆ ಸಾಯುವುದು ಎಂದು ಉಪಾಯ ಹೊಳೆದಿರಲಿಲ್ಲ. ರಾತ್ರಿ ಮಲಗು ದೇವರು ನಾನು ಮಲಗಿದಲ್ಲೆ ಸತ್ತು ಹೋಗುವಂತಾಗಲಿ ಎ ಪ್ರಾರ್ಥಿಸುತ್ತಿದ್ದೆ. ಬೆಳಿಗ್ಗೆ ಎಚ್ಚರಗೊಂಡಾಗ ಅಯ್ಯೋ ನಾನು ಇಲ್ಲ ಎಂದು ಮತ್ತೆ ಅಳುತ್ತಿದ್ದೆ. ಹೇಗಾದರೂ ಮಾಡಿ ಒಂದು ಸತ್ತುಬಿಡಬೇಕು ಎಂದು ಮನಸ್ಸಿನಲ್ಲೆ ವಿಚಾರ ಮಾಡುತ್ತಿ ನಿದ್ದೆಯಲ್ಲಿ ಅಜ್ಜಿ ಹೊಡೆದಂತೆ ಕನಸ್ಸುಬಿದ್ದು ಹೆದರಿ ಒದ್ದೆಮಾಡಿಕೊಳ್ಳುತ್ತಿದ್ದೆ. ಓದಲು ಪುಸ್ತಕವನ್ನು ನೆಪಮಾ ಮುಖಕ್ಕೆ ಅಡ್ಡ ಹಿಡಿದು ಕೊಂಡಿರುತ್ತಿದ್ದೆ. ಮನಸ್ಸೆಲ್ಲಾ ಊರಿನ ತಾಯಿ ಮನೆಯಲ್ಲಿರುತ್ತಿತ್ತು. ಅಜ್ಜಿ ಊಟಕ್ಕೊ ತಿಂಡಿಗೊ ಕರೆ ಪುಸ್ತಕ ಮುಚ್ಚಿಟ್ಟು ಹೋಗುತ್ತಿದ್ದೆ. ಅಜ್ಜಿ ನನಗೆ ದಪ್ಪ ಬೆಣ್ಣೆ, ಕೆನೆಹಾ ಏನೇನೊ ತಿಂಡಿ ತಿನ್ನಿಸಿದ್ದೂ ಅಲ್ಲದೆ ಎರಡೂ ಜೇಬುವಿಗೂ ತುಂ ಕಳಿಸುತ್ತಿದ್ದಳು. ಎಷ್ಟೊ ಬಾರಿ ಆ ತಿಂಡಿಯೆಲ್ಲಾ ಟಾಮಿ ನಾ ಒಳ್ಳೆ ಔತಣವಾಗುತ್ತಿತ್ತು. ಅನೇಕ ಸಲ ತಿಂಡಿ ವಾಸನೆಗೆ ಟಾಮಿನಾ ನನ್ನ ಬಿಚ್ಚಿ ಹಾಕಿದ್ದ ಚೆಡ್ಡಿಯನ್ನು ಎತ್ತಿಕೊಂಡುಹೋಗಿ ನಾ ಮಾಡುತ್ತಿತ್ತು. ಅಜ್ಜಿ ಮನೆಯಲ್ಲಿ ಆಡಲು ನನಗೆ ಯಾರೂ ಹುಡು ಸಿಗುತ್ತಿರಲಿಲ್ಲ. ಕೆಲಸದವರ ಮಕ್ಕಳೊಂದಿಗೆ ಮಾತನಾಡಲೂ ಅ ಬಿಡುತ್ತಿರಲಿಲ್ಲ. ಟಾಮಿನಾಯಿ ತಿಂಡಿ ತೋರಿಸಿದರೆ ವಾ ಬರುತ್ತಿತ್ತು. ತಿಂಡಿ ಇಲ್ಲವೆಂದು ಅದಕ್ಕೆ ಗೊತ್ತಾದರೆ ನಾನು ಈ ಕರೆದರೆ ಅದು ಬಾಲ ಬೀಸಿಕೊಂಡು ಬೇರೆಕಡೆ ಹೋಗುತ್ತಿತ್ತು. ಆಗೇ ನನಗೆ ಟಾಮಿನಾಯಿಯ ಮೇಲೆ ಸಿಟ್ಟು ಬರುತ್ತಿತ್ತು. ಆದರೂ ಒವ ಅಜ್ಜಿ ನನಗೆ ಹೊಡೆಯುತ್ತಿರುವಾಗ ಟಾಮಿ ಅಜ್ಜಿಯ ಕೈಯನ್ನು ಕ ರಕ್ತಬರಿಸಿತ್ತು. ಇದೇ ಕಾರಣಕ್ಕೆ ಟಾಮಿಯ ಬಗ್ಗೆ ನನಗೆ ವಿಶೇ ಗೌರವ.

(ಮುಂದುವರೆಯುತ್ತ

ಲೇಖನ : ಕುಂಭಗೌಡನ ರಂಜಿ

---

## ನನ್ನ ಪ್ರೀತಿಯ ಹುಡುಗಿಗೆ ಗುಲಾಬಿ

ಸಪ್ತ ಸಾಗರವ ದಾಟಿ ಸಂಜೀವಿನಿ
ತರಲು ನಾನು ಹನುಮಂತನಲ್ಲ
ಏಳು ಸುತ್ತಿನ ಕೋಟೆಗೆ ಲಗ್ಗೆ ಹಾಕಿ
ದೋಚಿ ತರಲು ನಾನು ಅಲೆಗ್ಸಾಂಡರ್ ಅಲ್ಲ
ಪುಟ, ಪುಟಗಳನ್ನು ತುಂಬಿಸಿ ಪ್ರೇಮ
ಕಾವ್ಯಾಭಿಷೇಕ ಮಾಡಲು ನಾನು ಕವಿ ಕಾಳಿದಾಸನಲ್ಲ
ನಿನ್ನ ಪುತ್ಥಳಿಯೊಂದನು ಕೆತ್ತಿ ಪಡೆಯಲು
ನಾನು ಅಮರಶಿಲ್ಪಿ ಜಕಣಾಚಾರಿಯಲ್ಲ
ಸುಖದ ಸುಪ್ಪತ್ತಿಗೆಯಲ್ಲಿ ನೂರ್‌ಜಾನ್‌ಳನ್ನು ಮೈಮರೆಸಿ
ರಮಿಸಿದಂತೆ ರಮಿಸಲು ನಾನು ಜಹಾಂಗೀರ್ ಅಲ್ಲ.
ನಿನಗಾಗಿ ನೀ ಮೆಚ್ಚುವ ಒಂದು ಕೆಂಪು ಗುಲಾಬಿಯನ್ನು
ತಂದು ಕೊಡಬಲ್ಲ ನಿನ್ನ ಪ್ರೀತಿಯ ಪ್ರೇಮಿ ನಾನು

**ಪಟ್ಟಡ ವಿಶಾಲಾಕ್ಷಿ ಹರೀಶ, ಮದೆಗ್ರಾಮ**



# ಾವು ಓಟು ಕೇಳಿಕೆ ಹೋಗಿದ್ದೊ

ಎಲೆಕ್ಷನ್ ಹತ್ರ ಬರ್ತಿದ್ದಂಗೇ ಊರುಲಿ ರಾಜಕೀಯ ುಡಾರಿಗಳ ಓಡಾಟ ಜಾಸ್ತಿಯಾತ್. ಇಂತಹ ಸಮಯಗಳ್ಲಿ ಮಾನ್ಯವಾಗಿ ಊರುಲಿ ಕಾಣಸಿಕಣುವ ಅವು ನಮ್ಮೊಟ್ಟಿಗೆ ಭಾರೀ ್ರೀತಿ, ವಿಶ್ವಾಸಲಿ ಸುಖ - ದುಃಖ ವಿಚಾರ್ಸಿಕಂಡ್, ಖಾಸ ನೆಂಟ್ರಂಗೇ ದ್ದವೆ. ಅಗತ್ಯವಾಗಿ ಬೇಕಾದ ಸೌಲಭ್ಯಗ ಊರುಲಿ ಇಲ್ಲದೇ ಇರುದು ಂಡ್ ಬಹಳ ಬ್ಯಾಜರ ಮಾಡಿಕಂಡವೆ. ನಮ್ಮ ಊರು ಇಷ್ಟೊಂದು ಂದುಳಿಯಕೆ ಎದ್‌ರ ಪಕ್ಷದವೇ ಕಾರಣಂತೇಳಿ ಒಬ್ಬರ್‌ಂದೊಬ್ಬ ೂರು ಹೇಳಿ, ಇನ್ನ್ ಮುಂದೆ ನೀವು ಇದರ ಬಗ್ಗೆ ಚಿಂತೆ ಾಡೊಕುತಿಲ್ಲೆತ ಧೈರ್ಯ ಹೇಳುವೆ. ಊರುಗೆ ಬೇಕಾದ ೌಕರ್ಯಗಳ್ನೆಲ್ಲ ಒದ್‌ಗಿಸಿಕೊಟ್ಟ್ ಅಭಿವೃದ್ಧಿಪಡ್ಸುವ ಜವಾಬ್ದಾರಿ ಮ್ಮದ್‌ತ ಭರವಸೆ ಕೊಟ್ಟವೆ. ಒಟ್ಟಾರೆ ಜನರ ಮನ್ಸ್‌ಗೆ ುಷಿಯಾಗುವಂಗೆ ಮಾತಾಡಿ ಓಟು ಹಾಕ್ಸಿಕಂಡವೆ. ಆದರೆ ಅವರ ಾರ್ಯ ಕಳ್ದಮೇಲೆ ಮತ್ತೆ ಪತ್ತೇ ಇರ್ದುಲೆ. ಜನ, ಅವು ಆಡ್‌ದ ಾತ್‌ನ ಗ್ಯಾನಮಾಡಿಕಂಡ್ ಊರು ಅಭಿವೃದ್ಧಿಯಾಗುವ ಕನ್ಸ್ ಾಣ್ತಾ ಇದ್ದವೆ. ಆದರೆ ಈ ಕನ್ಸ್ ನನ್ಸಾಗುವ ಸಾಧ್ಯತೆಯಿಲ್ಲದೆ, - ಶಾಲೆ, ರಸ್ತೆ, ಕರೆಂಟ್ ಮುಂತಾದ ಸೌಲಭ್ಯಗಳ ಪಡಿಯಕಾಗದೆ ಊರು ಇನ್ನೂ ಪಂಡ್‌ಲಿ ಇದ್ದಂಗೇ ಉಟ್ಟು. ಇದ್‌ಕೆಲ್ಲ ಏನಾದರ್ ಪರಿಹಾರ ಕಂಡೇ ತೀರಕುತ ಗ್ಯಾನಮಾಡಿ ಈ ಸಲ ನಮ್ಮ ಊರುಂದೇ ಒಬ್ಬನ ಓಟುಗೆ ನಿಲ್ಸಿ ಗೆಲ್ಸಕುತ ಮನ್ಸ್ ಮಾಡ್ದೊ. ನಮ್ಮಲ್ಲಿ ತಕ್ಕಮಟ್ಟಿಗೆ ಪುಡಾರಿತರ ಇರಂವ ಅಪ್ಪು. ಹಂಗಾಗಿ ಯಾವ ತಕರಾರೂ ಇಲ್ಲದೆ ಅವನೇ ನಮ್ಮ ಅಭ್ಯರ್ಥಿಯಾಗಿ ನಿತ್ತತ್. ಬೇಕಾದ ತಯಾರಿ ಎಲ್ಲ ಮಾಡಿಕಂಡ್ ಒಬ್ಬೊಬ್ಬಂಗೆ ಒಂದೊಂದು ಕೆಲ್ಸ ವಹಿಸಿದೊ. ಕೆಲವು ಜನರ ಬೇರೆ ಬೇರೆ ಗುಂಪು ಮಾಡಿ ಇಂತಿಂತವು ಇಂತ ಕಡೆ ಓಟು ಕೇಳಿಕೆ ಹೋಕುತ ಹೇಳಿ ಕಳ್ಸಿದೊ.

ನಾಡೊಳಗೆ ಓಟು ಕೇಳಿಕೆ ಹೋದರೆ ಭಾರೀ ಮಜಾ ಇದ್ದದೆ. ಪ್ರತಿಯೊಂದು ಮನೆಗಳ್ಲೂ ಕರಿಕಾಫಿ, ಬಿಳಿಕಾಫಿ, ಟೀ, ಬಿಸ್ಕೆಟ್ ಚೌಚೌ, ಸಿಹಿತಿಂಡಿ ಹಿಂಗೆ ಎಂತಾದರ್ ಇದ್ದೇ ಇದ್ದದೆ. ಇದರ್ನೆಲ್ಲ ಗ್ಯಾನ ಮಾಡ್ತ್ಯಾಕನ ನಮ್ಮ ಹುರುಪು ಇನ್ನೂ ಜಾಸ್ತಿಯಾತ್. ಇದೇ ಖುಷಿಲಿ ನಾವು ಸುಬ್ಬಯ್ಯ ಮಾವನ ಮನೆಗೆ ಹೋಕನ, ಹಟ್ಟಿಬಾಚಿಸೆಗಣಿ ಕುಕ್ಕೆನ ತಲೆ ಮೇಲೆ ಹೊತ್ತ್‌ಕಂಡ್ ಬಾತಿದ್ದ ಅತ್ತೆ ಹಾದಿಲೇ ಸಿಕ್ಕಿದೊ. ಇವು ಮನೆಲೇ ಒಳೊ. ನೀವು ಮನೆಗೆ ಹೋಗಿ, ನಾನ್ ಈಗ ಬನ್ನೆತ ನಮ್ಮನ ಅತ್ತ ಕಳ್ಸಿದೊ.

ಸುಬ್ಬಯ್ಯ ಮಾವ ಸೀದಾ ಸಾದಾ ಜನ. ಯಾವ ಸಂಗತಿಯಾದರೂ ಮುಚ್ಚುಮರೆಯಿಲ್ಲದೆ ಎಲ್ಲ ಎದೆದ್ರಿಗೇ ಹೇಳೊವು. ನಾವು ಓಟು ಕೇಳಿಕೆ ಹೋದ್ ಗೊತ್ತಾಗಿ ಅವುಕೆ ಪಿತ್ತ ನೆತ್ತಿಗೇರ್ದಂಗೆ ಆತ್. ಈ ರಾಜಕಾರಣಿಗಳ ಹಣೆಬಹರನೇ ಇಷ್ಟ್. ಸಮಯ ಬಾಕನ ಕೈ ಮುಗಿತಾ, ಎಂದೂ ಇಲ್ಲದ ಪ್ರೀತಿ ತೋರ್ಸಿಕಂಡ್ ಬಂದವೆ. ಅವರ ಮಾತ್ ಕೇಳ್ರೇ ಹೊಟ್ಟೆ ತುಂಬೊಕು! ಎಲ್ಲ ಅನುಕೂಲಗಳೂ ನಿಮ್ಮ ಮನೆ ಬಾಗ್‌ಲಿಗೇ ಬರುವಂಗೆ ಮಾಡುವೆ, ಇನ್ನ್‌ಮುಂದೆ ನಿಮಿಗೆ ಯಾವ ತೊಂದರೆಗಳೂ ಇಲ್ಲದಂಗೆ ನೋಡಿಕಂಡವೆ, ಹಂಗೆ, ಹಿಂಗೆತಲ್ಲ ಡೋಂಗಿಬುಟ್ಟ್ ಇಲ್ಲದ ಆಸೆ ಹುಟ್ಟುಸುವೆ. ಎಲ್ಲ ಅವರ ಕೆಲ್ಸ ಆಕೆಮುಟ್ಟ ಮಾತ್ರ. ಮತ್ತೆ ಒಬ್ಬನೂ ಇತ್ತ ಸುಳಿಯದುಲೆ. ಇನ್ನೊಮೆ ಅವರ ಮುಸುಂಡು ಕಾಂಬೊದು ಮತ್ತೊಂದು ಎಲೆಕ್ಷನ್ ಸಮಯಲೇ. ಅಧಿಕಾರ ಕೈಗೆ ಬಂದರಗೇ ತಮ್ಮ ಹೊಟ್ಟೆ ತುಂಬುಸಿಕಣೆಕೆ ಪೇಚಾಡುವ ಇವುಕೆ ಊರು ಉದ್ದಾರ ಆಗಿ ಏನಾಕು ? ಕೊಡಿಗೆ ಹತ್ತಿಬಂದ ಏಣಿನೇ ಒದ್ದ್ ಬೀಳ್ಸುವಂತ ಉಪಕಾರ ಅರಿಯದ ಜನ ಇವು. ಊರುಲೊಂದು ಶಾಲೆ ಇರೊಕು, ರಸ್ತೆ ಮಾಡೊಕು, ಹೊಳೆಗೆ ಸೇತುವೆ ಆಕುತೆಲ್ಲ ಇಷ್ಟ್ ವರ್ಷಂದ ನಾವು ಒದ್ದಾಡ್ತಾವೊಳಲ, - ನಮ್ಮಿಂದ ಓಟು ತಕಂಡ್ ಗೆದ್ದ್ ಹೋದಂವ ಯಾವನಾದರ್ ಬಂದ್ ನಮ್ಮ ಕಷ್ಟ ನೋಡಿ ಸಹಾಯ ಮಾಡ್ಯುಟ್ಟಾ ಹೇಳಿ ? ಸ್ವಲ್ಪನಾದರ್ ಮಾನ ಮರ್ಯಾದೆ ಇರೊಂವಾದರೆ ಕೊಟ್ಟ ಮಾತ್‌ನ ಉಳ್ಸಿಕಣೆಕೆ ಆಗದ ಮೇಲೆ ಮತ್ತೆ ತಿರ್ಗಿ ಇತ್ತ ಮೊಕ ಹಾಕಿಕಿಲ್ಲೆ. ಆದರೆ ಎಲ್ಲ ಬುಟ್ಟ್ ನಿತ್ತ ಇವುಕೆ ಅದೆಲ್ಯುಟ್ಟು ? ಜನ ಸೇವೆ ಮಾಡುವ ತಮ್ಮ ಕರ್ತವ್ಯನ ಬುಟ್ಟ್, ಸಿಕ್ಕಿದಷ್ಟ್ ಬಾಚಿ ನುಂಗಿ ನೀರು ಕುಡಿಯುವ ಇಂತಹ ಸ್ವಾರ್ಥಿಗಳಿಗೆ ಓಟು ಹಾಕಿ ಗೆಲ್ಸುದು ದೇಶಕ್ಕೆ ದ್ರೋಹ ಮಾಡುವಂತದ್. ಇದೆಲ್ಲ ಗ್ಯಾನಮಾಡ್ರೆ ಹುಚ್ಚು ಹಿಡಿಯುವಂಗೆ ಆದೆ. ಹೆಂಗಾದರ್ ಸಾಯಲಿ ಅತ್ತ. ನಾನಂತೂ ಈ ಸಲ ಯಾರಿಗೂ ಓಟು ಹಾಕುದುಲೆತ ಹೇಳ್ದೊ.

ಅವರ ರಬಸ ಸ್ವಲ್ಪ ಕಮ್ಮಿ ಆದ ಮೇಲೆ ರವಿ - ನೀವು ಹೇಳುವ ಮಾತ್ ನೂರಕೆ ನೂರರಷ್ಟ್ ಸತ್ಯ ಮಾವ. ಆದರೆ ರಾಜಕೀಯಲಿ ಇರೊವು ಎಲ್ಲವೂ ಸ್ವಾರ್ಥಿಗ, ಸಮಯ ಸಾಧಕರ್‌ತ ಹೇಳ್‌ಕಾದುಲೆ. ಒಳ್ಳವು, ಕೆಟ್ಟವುತೇಳುವಂತವು ಎಲ್ಲ ಕಡೆಗೂ ಇದ್ದವೆ. ಆದರೆ ಇಲ್ಲಿ ಅವರ ಸಂಖ್ಯೆ ಸ್ವಲ್ಪ ಹೆಚ್ಚಾಗಿ ಇರ್ದು ಅಷ್ಟೇ. ಎಂತ ಮಾಡ್‌ಕಾದೆ ಹೇಳಿ. ಅಧಿಕಾರ ಕೈಗೆ ಬಾಕನ ಕೆಲವರ ಮನ್ಸ್ ಆ ತರ ಆದೆ. ಇದ್‌ಕೆ ನಾವೇ ಏನಾದರ್ ಪರಿಹಾರ ಹುಡುಕೊಕಲ್ಲದೆ, ಹಿಂಗೆ ನಿರಾಶರಾದರೆ ಆದುಲೆ. ಈಗ ನೀವು ಓಟು ಹಾಕುದುಲೆ ತೇಳ್ದರಿ. ನಿಮಿಗೆ ತುಂಬಾ ಹತ್ರದ ನಾಲ್ಕಾರ್ ಜನರ್ನೂ ಓಟು ಹಾಕದಂಗೆ ತಡೀವರಿ. ಆದರೆ ಇಡೀ ಕ್ಷೇತ್ರಲಿರುವ ಜನ ಓಟು ಹಾಕದಂಗೆ ಮಾಡಿಕೆ ನಿಮ್ಮಿಂದ ಆಕಿಲ್ಲೆ. ತಿಳುವಳಿಕೆ ಇರುವಂತ ನಿಮ್ಮಂಥವು ಹಿಂಗೆ ಕೈಕಟ್ಟಿ ಕುದ್ದರೆ, ಪುನಃ ಸ್ವಾರ್ಥಿಗಳಿಗೇ ಮುಂದೆ ಬಾಕೆ ಎಡೆಮಾಡಿಕೊಟ್ಟಂಗಾದೆ. ಇದೆಲ್ಲ ಗ್ಯಾನಮಾಡಿಯೇ ಈ ಸಲ ಅಪ್ಪುನ ಒಟುಗೆ ನಿಲ್ಸ್ಯೊಳದ್. ನಾವೆಲ್ಲ ಒಗ್ಗಟ್ಟಾಗಿ ಒಮ್ಮೆ ಅವನ ಗೆಲ್ಸನೊ. ಇನ್ನೊಬ್ಬನ ನಂಬಿಕಂಡ್ ಕೂರುದಕ್ಕಿಂತ ನಮ್ಮ ಕೆಲ್ಸ ನಾವೇ ಮಾಡಿಕಣೊತ ನಮ್ಮಂದ ಸಾಧ್ಯವಾದಷ್ಟು ಸಮಾಧಾನ ಹೇಳ್ದೊ.

ಮಾದಪ್ಪ ಚಾಂಪನ ಮನೆಗೆ ಓಟು ಕೇಳಿಕೆ ಹೋಕನ ಅಲ್ಲಿ ಚಾಮೆವ್ವ, - ನನ್ನ ಕೈಂದ ಅಷ್ಟ್ ದೂರ ನಡ್ಕಬಂದ್ ಓಟು ಹಾಕಿಕೆ ಆಕಿಲ್ಲೆವ್ವ. ಯಾರಾದರ್ ಜೀಪು ಕಳ್ಸಿಕೊಟ್ರೆ ಬಾವೆತ ಹೇಳ್ದೊ. ನಮ್ಮ ಅಪ್ಪುಣು ಒಬ್ಬ ಹುಡುಗಾಟದಂವ - ನೀವು ಕೈಲಿ ನಡ್ಯಕೆ ಹೋಬಡಿ ಚಾಮೆವ್ವ, ಕಾಲ್‌ಲೇ ನಡ್ಕಬನ್ನಿತ ಹೇಳ್ತ್. ಒಟ್ಟಿಗೇ ರವಿ - ಯಾವದೇ ಪಾರ್ಟಿಯವು ಕಳ್ಸುವ ವಾಹನಲಿ ಓಟು ಹಾಕಿಕೆ ಹೋಕಾಗದ್. ಹಂಗೆಲ್ಲಾದರ್ ಹೋದರೆ ಒಳ್ಳೆಯವನೊ, ಕೆಟ್ಟವನೋತ ನೋಡದೆ ಕರ್ಕಂಡ್ ಹೋದ ಮುಲಾಜಿಗೆ ಅವರ ಕಡೆಯವಂಗೇ ಓಟು

ಹಾಕಿಕಾದೆ. ಹಿಂಗಾದರೆ ನಮ್ಮ ಕರ್ತವ್ಯನ ನಾವು ಸರಿಯಾಗಿ ಮಾಡ್ದಂಗೆ ಆದುಲೆ. ಅಂತೂ ನಿಮ್ಮ ಕಷ್ಟನ ಗ್ಯಾನಮಾಡಿ ಅಂದ್ ಯಾವದಾದರ್ ಜೀಪು ಇದ್ದರೆ ಕಳ್ಸಿಕೊಟ್ಟನೆತ ಹೇಳ್ತ್.

ಮಾಚಯಣಾನ ಮನೆಗೆ ಪೋಯಿತೇಳ್ಕನ ಗಪ್ಪು - ಅಂವ ಯಾರ್ ದುಡ್ಡು ಕೊಟ್ಟವೆ ಅವರ ಕಡೆಗೇರಾ. ಅಲ್ಲಿಗೆ ಹೋದರೂ ಏನೂ ಪ್ರಯೋಜನ ಆಕಿಲ್ಲೆತ ಹೇಳ್ತ್. ಹಿಂಗೆ ಮಾತಾಡಿಕಂಡ್ ಬಾಕನ ಅವು ಅಂಗಡಿಗೆ ಹೋಗಿ ಬಾತಿದ್ದವು ದಾರಿಲೇ ಸಿಕ್ಕಿದೊ. ಎರ್‍ಡ್ - ಮೂರು ಪ್ಯಾಕೆಟ್ಟಾದರ್ ಕಾಲಿ ಮಾಡಿತ್‌ಕಂಡದೆ. ದೂರಲಿ ಬಾಕನೇ ವಾಸನೆ ಬಾತಿತ್. ಈಗ ಅವರೊಟ್ಟಿಗೆ ಮನೆಗೆ ಹೋದರೆ ಸರಿಯಾಕಿಲ್ಲೆತೇಳಿ ಸೀದ ಹೊಳೆಕರೆ ದೊಡ್ಡಪ್ಪನಲ್ಲಿಗೆ ಹೋದೊ. ದೊಡ್ಡಪ್ಪ ಸ್ವಲ್ಪ ಧಾರಾಳಿ. ಮನೆಗೆ ಯಾರಾದರ್ ಭಿಕ್ಷೆ ಬೇಡೊವು ಬಂದರೂ ಬರಿಕೈಲಿ ಕಳ್ಸವಲ್ಲ. ಓಟು ಹಾಕುವ ವಿಚಾರಲಿ ಕೂಡ ಅವು ಇದೇತರ ದೊಡ್ಡಮನ್ಸ್ ಮಾಡ್ಯೊಳೊ. ಅಪ್ಪಣು ಅವರೊಟ್ಟಿಗೆ ತಮಾಷಿಯಾಗಿ ಮಾತಾಡಿಕಂಡ್, ಕಳ್ದಸಲ ನೀವು ಯಾರಿಗೆ ಓಟು ಹಾಕಿದ್‌ತ ಕೇಳ್ತ್. ನಾನ್ ಯಾರಿಗೂ ಅನ್ಯಾಯ ಮಾಡಿಕೆ ಹೋತ್ಲೆವ್ವ. ಮನೆಗೆ ಬಂದ್ ಓಟು ಕೇಳಿ ಹೋದವು ಎಲ್ಲವುಕ್ಕೂ ಓಟು ಹಾಕ್ಯೊಳೆತೇಳ್ಕನೇ ಅವರ ಓಟುನ ಗುಟ್ಟು ಗೊತ್ತಾದ್ ಅಯ್ಯೊ ! ಹಂಗೆ ಮಾಡ್ರೆ ನಿಮ್ಮ ಓಟುಗೆ ಬೆಲೆಯಿಲ್ಲದೆ, ನೀವು ಓಟು ಹಾಕಿನೂ ಪ್ರಯೋಜನ ಇಲ್ಲದಂಗಾದೆ. ಅಲ್ಲಿ ಎಷ್ಟೇ ಹೆಸ್‌ರ್ ಇದ್ದರೂ ನಿಮಿಗೆ ಬೇಕಾದವು ಯಾರಾದರ್ ಒಬ್ಬಂಗೆ ಮಾತ್ರ ಹಾಕಕು. ಈ ಸಲ ಹಂಗೆ ಮಾಡಿ ಓಟು ಹಾಳ್ ಮಾಡ್ಬಡಿ. ನಮ್ಮ ಅಪ್ಪುನ ಹೆಸ್‌ರ್ ಮುಂದೆ ಮಾತ್ರ ಗುರ್ತು ಮಾಡ್ರೆ ಸಾಕ್‌ತ ಹೇಳಿ ಅವುಕೆ ಅರ್ಥ ಮಾಡ್ಸಿದೊ.

ಚಾಮಿ ಸಣಪನ ಮನೆಗೆ ಹೋಕನ ಸಣವ ಅಂಗಳ ನಿತ್‌ಕಂಡ್ ಬಾಬಾಬಾ... ತ ಮೇವು ಹಾಕಿಕೆ ಕೋಳಿಗಳ ಕರಿಯುತ್ತಿದೆ ಈಗ ಕೋಳಿಕೊಂದ್ ನಿಮ್ಮ ಅಡಿಗೆ ಆಕನ ಹೊತ್ತು ಸುಮಾರ್ ಆದ ಅಷ್ಟೊತ್ತು ನಿಲ್ಲಿಕೆ ನಮಿಗೆ ಸಮಯ ಇಲ್ಲೆತ ತಮಾಷಿಮಾಡಿಕಂ ಹೋದೊ. ಇವು ಯಾಲ ಕೊಯ್ಯಕೆ ತೋಟಕೆ ಹೋಗೊಳೆ ಮಧ್ಯಾಹ್ನ ಬಂದವೆ ಸ್ವಲ್ಪೊತ್ತು ಕುದ್ದುರಿತ ಹೇಳ್ದೊ. ಇನ ಸುಮಾರ್ ಮನೆಗಳಿಗೆ ಹೋಕುಟ್ಟು ಹೆಚ್ಚಿ ಹೊತ್ತು ಇರ್‌ಕಾದುಲೆ ಅಲ್ಲಿಂದ ಹೊರ್‍ಟೊ. ಆಗ ಸಣವ, - ಓಟು ಹಾಕಿಕೆ ಹೋದ ಅವರಿವರೊಟ್ಟಿಗೆ ಮಾತಾಡಿಕಂಡ್ ನಿತ್ತಾಕನ ಹೊತ್ತು ಹೋ ಗೊತ್ತಾದ್ಲೆ. ಅಂದ್ ಇಡೀ ದಿನ ಕೆಲ್ಸ ಹಾಳ್. ಈ ಸಲ ಓಟು ಹಾ ಹೋದುಲೆತ ನಿಮ್ಮ ಸಣಪ ಹೇಳ್ತಿದ್ದೊತ ಹೇಳ್ದೊ. ಛೇ ..... ಹಂಗೆಲ್ಲಾದರ್ ಮಾಡ್ಬಡಿ. ಸ್ವಲ್ಪ ತೊಂದರೆ ಆದರೂ ಪರ್‍ವಾಗಿಲ್ಲೆ ಓಟು ಹಾಕದಿರ್‍ಬಡಿ. ಸಮಯ ಬಾಕನ ನಮ್ಮ ಕರ್ತವ್ಯನ ನಾ ಸರಿಯಾಗಿ ಮಾಡದೆ, ನಾಳೆ ಯಾವನೋ ಋಣತಿಂಬವ ಗೆದ್ದ್ ಬಂದ್ ನಮಿಗೆ ತೊಂದರೆ ಆಕನ ಅವನ ಬೈದರೆ ಪ್ರಯೋಜನ ಇಲ್ಲೆ ಅದರ್‌ಂದ ಓಟು ಹಾಕಿಕೆ ಮಾತ್ರ ಮರೀಬಡಿ. ಇನ್ನೊಮ್ಮೆ ಬಂದ ಸಣಪನ ಕಂಡವೆತೇಳಿ ಬಂದೊ.

ಹಿಂಗೆ ಒಂದೊಂದು ಮನೆಗಳಲಿ ಒಂದೊಂದು ತರ ಅನುಭವ ಎಲ್ಲಾ ಹೇಳ್ತಾ ಹೋದರೆ ಎಷ್ಟೊ ಉಟ್ಟು. ಇನ್ನೊಂದಿನ ಯಾಗಾದರ ಕಾಂಬಕನ ಆರಾಮವಾಗಿ ಮಾತಡನೊ.

**-ಚಾಂಗನ ಸಿ. ಪೂವಯ್ಯ, ಮೊಣ್ಣಂಗೇ**

## ಹೊಲಿಗೆಯಂತ್ರವನ್ನು ಹೇಗೆ ಕಂಡು ಹಿಡಿಯಲಾಯಿತು?

ಹೊಲಿಗೆಯಂತ್ರ ನಮ್ಮೆಲ್ಲರಿಗೂ ಸುಪರಿಚಿತ. ಅದನ್ನು ನೋಡಿಲ್ಲದವರೇ ಇಲ್ಲ ಬಟ್ಟೆಗಳನ್ನು ಮತ್ತು ಚರ್ಮದ ವಸ್ತುಗಳನ್ನು ಹೊಲಿಯಲು ಈ ಯಂತ್ರವನ್ನು ಬಳಸಲಾಗುವುದು. ಇಂದು ಹೊಲಿಗೆಯಂತ್ರ ಮನೆಗೆ ಅತ್ಯಂತ ಉಪಯುಕ್ತವಾದ ಒಂದು ಸಾಧನ. ಅವುಗಳಲ್ಲಿ ಎರಡು ವಿಧ. ಒಂದು ಕೈಯಿಂದ ನಡೆಸುವ ಯಂತ್ರ. ಮತ್ತೊಂದು ಪಾದದಿಂದ ಒತ್ತಿ ನಡೆಸುವ ಯಂತ್ರ.

ಮೊಟ್ಟ ಮೊದಲು ಹೊಲಿಗೆ ಯಂತ್ರದ ವಿನ್ಯಾಸವನ್ನು ಇಂಗ್ಲೇಂಡಿನ ಥಾಮಸ್ ಸೆಯಿಂಟ್ ಎಂಬಾತ ಸಿದ್ಧಪಡಿಸಿದ. ಅದರಲ್ಲಿ ಕೆಲವು ದೋಷಗಳಿದ್ದ ಕಾರಣ ಅದನ್ನು ಉಪಯೋಗಿಸಲು ಸಾಧ್ಯವಾಗಲಿಲ್ಲ. ಅನಂತರ 1830ರಲ್ಲಿ ಫ್ರಾನ್ಸ್‌ನ ಬಾರ್ತಲೆಮಿ ಥಿಮ್ಮೊನಿಯರ್ ಎಂಬ ಬಡ ದರ್ಜಿಯೊಬ್ಬ ಹೊಲಿಗೆಯಂತ್ರವನ್ನು ತಯಾರಿಸಿದ. ಈ ಯಂತ್ರ ಪೇಟೆಯಲ್ಲಿ ಮಾರಾಟವಾಗಲಾರಂಭಿಸಿತು. ಆಗ, ಕೈಯಿಂದಲೇ ಬಟ್ಟೆಗಳನ್ನು ಹೊಲಿಯುತ್ತಿದ್ದ ದರ್ಜಿಗಳಿಗೆ, ತಮ್ಮ ಕಸುಬಿಗೆ ಧಕ್ಕೆ ಬರುವುದೆಂಬ ಹೆದರಿಕೆ ಉಂಟಾಯಿತು. ತಾವು ನಿರುದ್ಯೋಗಿಗಳಾಗುತ್ತೇವೆಂಬ ಭಯ ಅವರನ್ನು ಕಾಡಿಸುತ್ತಿತ್ತು. ಆ ದರ್ಜಿಗಳು ಕುಪಿತರಾಗಿ ಹೊಲಿಗೆ ಯಂತ್ರದ ಕಾರ್ಖಾನೆಗಳನ್ನು ಮತ್ತು ಅಲ್ಲಿ ತಯಾರಾಗಿದ್ದ ಯಂತ್ರಗಳನ್ನು ನಾಶ ಮಾಡಿದರು. 1832ರಲ್ಲಿ ಅಮೇರಿಕಾದ ವಾಲ್ಟರ್ ಹಂಟ್ ಮತ್ತೊಂದು ಮಾದರಿಯ ಹೊಲಿ ಯಂತ್ರವನ್ನು ಅಭಿವೃದ್ಧಿ ಪಡಿಸಿದ.

ಯಶಸ್ವಿಯಾಗಿ ಬಳಕೆಗೆ ಬಂದ ಮೊಟ್ಟ ಮೊದಲ ಹೊಲಿ ಯಂತ್ರವನ್ನು ತಯಾರಿಸಿದ ಕೀರ್ತಿ ಅಮೇರಿಕಾದ ಐಸಾಕ್ ಸಿಂಗರ್‌ಗೆ ಸಲ್ಲುತ್ತದೆ. ಅವನು 1851ರಲ್ಲಿ ಉಕ್ಕಿನ ಹೊಲಿಗೆ ಯಂತ್ರವನ್ನು ಕಂಡುಹಿಡಿದ ಅವನ ಹೆಸರಿನಲ್ಲೇ ಸಿಂಗರ್ ಕಂಪೆನಿ ಅಸ್ತಿತ್ವಕ್ಕೆ ಬಂದಿತು. ಅವನು ರೂಪಿಸಿದ ವಿನ್ಯಾಸ ವಿಶ್ವದ ಎಲ್ಲಾ ಭಾಗಗಳನ್ನು ತಲುಪಿತು. 1889ರಲ್ಲಿ ವಿದ್ಯುಚ್ಛಕ್ತಿ ನೆರವಿನಿಂದ ಓಡಿಸುವ ಹೊಲಿಗೆ ಯಂತ್ರಗಳನ್ನು ಕಂಡುಹಿಡಿಯಲಾಯಿತು. ಈಗ ನಾನಾ ಬಗೆಯ ಹೊಲಿಗೆ ಯಂತ್ರಗಳನ್ನು ತಯಾರಿಸಲಾಗುತ್ತಿದೆ. ಇವಲ್ಲದೇ ಸ್ವೆಟರ್ ಮುಂತಾದ ಉಣ್ಣೆವಸ್ತುಗಳನ್ನು ಹೆಣೆಯುವ ಮತ್ತು ಕಸೂತಿ ಹಾಕುವ ಯಂತ್ರಗಳು ಸಹ ಪೇಟೆಯಲ್ಲಿ ಮಾರಾಟವಾಗುತ್ತಿದೆ.

**ಸಂಗ್ರಹ : ಕೂಡಕಂಡಿ ಅನಿತಾ ನಂಜುಂಡ**
**ಚೇರಂಬಾಣೆ**

---

"ಪರಿಸ್ಥಿತಿ ಬದಲಾಗದ ಹೊರತು ನಮ್ಮ
ಜನಾಂಗ ಪ್ರಗತಿ ಹೊಂದಲು ಸಾಧ್ಯವಿಲ್ಲ"

**ಪಟ್ಟಡ ಪ್ರಭಾಕರ**

# ಯೂಸೆ ಗತಿಗೇಡ್

[ಸತ್ಯಕಥೆ]

ನಾಗಣ್ಣ ಯಾಗೋಳ್‌ನಂಗೆ ಅಂದ್ ಬೆಳಿಗ್ಗೆ ಫ್ಯಾಕ್ಟರಿಗೆ ಕೆಲ್ಸಕ್ಕೆ
ನ ಎರ್ಡ್ ಕ್ಯಾನ್‌ಲಿ ಹಾಲ್ ತಕಂಡ್ ಹೋಗಿ ಡೈರಿಗೆ ಕೊಟ್ಟ್
ೆ ಕೆಲ್ಸಕ್ಕೆ ಹೋದು. ಅಂವಂಗೆ ನಾಲಕ್ಕು ಹೆಣ್ಣ್ ಮಕ್ಕ. ಎರಡು
ಮಕ್ಕ, ಮೂರು ಮಕ್ಕ ಸ್ಕೂಲಿಗೆ ಹೋದವೆ. ಆ ದಿನ ಮಕ್ಕ
ಸ್ಕೂಲಿಗೆ ಹೋಗಿದ್ದೊ. ನಾಗಣ್ಣನ ಹೆಣ್ಣ್ ನೀಲುನು, ಮಗಳು
ಗೂಡೆನು ಅಂದ್ ಮನೆಲೆ ಇದ್ದೊ. ಅದೇ ದಿನ ಒಂದು
ಸ್ ಬಾತ್. ಅದ್ ಬಂದ್ ನೀಲಕ್ಕನೊಟ್ಟಿಗೆ ಭಾರೀ ಲಾಯ್ಕಲಿ
ು ಇದ್ದವರಂಗೆ ಮಾತಾಡ್ತ್. ಮಾಮೂಲ್‌ನಂಗೆ ಕಷ್ಟ ಸುಖ
ಸ್ಕಂಡ್ ಚೂರು ಪಾರ್ ಅವರ ಮನೆ ವಿಚಾರನ ಕೂಡ ಕೇಳಿ
ತತ್. ನೀವು ಈಗ ತುಂಬಾ ಕಷ್ಟಲಿ ಒಳರಿತ ನಿಮ್ಮ ಮಾತ್
ನ ಗೊತ್ತಾದೆ ನೀಲಕ್ಕತ. ಆ ಹೆಂಗ್‌ಸ್ ಹೇಳ್ತ್. ನಿಮ್ಮ ಕಷ್ಟ
ಅರ ಆಕುತಾದರೆ ನೀವು ಒಂದು ಕೆಲ್ಸ ಮಾಡಿ ನಿಮ್ಮ ಪಾಲಿಗೆ
ನೇವು ಕಣ್ಣ್ ಬುಡ್ತಾ ಉಟ್ಟು ಆದರ್‌ಂದ ನಾಳೆ ಬೆಳಿಗ್ಗೆ ನಮ್ಮ
ನಿಮ್ಮ ಮನೆಗೆ ಒಂದ್ ಜನ ಬಂದವೆ. ಅಂವ ಬಾಕನ ನಿಮ್ಮಲ್ಲಿ
ರ ಚಿನ್ನ, ದುಡ್ಡುನ ಎಲ್ಲ ತಂದ್ ಕೊಡಿ. ಅದರ್ನ ಅಂವ ಮಂತ್ರ
ಬುಟ್ಟ್ ಚಿನ್ನ ಮತ್ತೆ ದುಡ್ಡುನ ಎರಡರಷ್ಟಾಗುವಂಗೆ
ಕೊಟ್ಟದೆ. ಇದರ್‌ಂದ ನಿಮ್ಮ ದರಿದ್ರ ಸ್ವಲ್ಪ ನೀಗದು. ಮತ್ತೆ
ಳ್ದ ಎರ್ಡ್ ಗೂಡೆಗಳ ಮದ್ವೆ ಮಾಡಿಕೆಸ ಒಳ್ಳದ್ ಆದುತ ಹೇಳ್ತ್.
ೆ ಅಂವ ಬಂದಂಗೆ ಮನೆ ಒಳಗೆ ಸೇರ್ಸಿಕಂಡ್ ಬಾಗ್ಲ್ ಹಾಕಣಿ.
ೆ ಯಾರೂ ನೋಡಿಕಾಗದ್ ಬೇರೆವರ ಯಾರ್ನ ಕೂಡ ಮನೆಗೆ
ಕಂಬಡಿತ ಹೇಳ್ತ್. ನೀಲಕ್ಕ ಮನಿ ಹಳ್ಳಿ ಜನಗ. ಓದಿದೂ ಕಮ್ಮಿ,
ಸ್ವಲ್ಪ ತಿಳುವಳಿಕೆನೂ ಇಲ್ಲದರ್‌ಂದ ಆ ಹೆಂಗ್‌ಸ್ ಹೇಳ್ದರ
ಲಿ ಒಪ್ಪಿಕಂಡತ್.

ಮಾಮೂಲಿನಂಗೆ ಗಂಡ ಕೆಲ್ಸ ಮುಗ್ಸಿ ಸಾಯಂಕಾಲಾಕನ ಮನೆಗೆ
್. ಅಂದರೂ ನೀಲು ಅಕ್ಕ ಒಂದು ವಿಷಯಾನೂ ಗಂಡನೊಟ್ಟಿಗೆ
ು ಬುಟ್ಟತೇಲೆ. ಚಿನ್ನ ಮತ್ತೆ ದುಡ್ಡು ಜಾಸ್ತಿ ಆದ ಮ್ಯಾಲೆ
ೂನ್ನತ ಗ್ಯಾನ ಮಾಡ್ತೋ ಏನೋ? ಅಂತು ಎಲ್ಲವು ಸೇರಿ ರಾತ್ರೆ
ತ ಮಾಡಿಕೆ ಕುದ್ದೊ. ಅಂದ್ ಊಟಕೆ ಗಮ್ಮತ್ತ್ ಬ್ಯಾರೆ
ತಿತ್. ಯಾಗೋಳು ಉಪ್ಪು ಮೆಣ್ಸ್‌ಲಿ ಕೊಟ್ಟ್ ಸುಧಾರ್ಸಿಬುಡಂವ
ರೇನ್‌ನೆ ಗಮ್ಮತ್ ಮಾಡ್ಯೊಳ ಕಂಡದೆ ಏನೋ ವಿಶೇಷ ಇರೊಕು
ದೆಲ. ಏನ್ ವಿಶೇಷ ಮನೆಗ ಯಾರ್ ಬಂದಿದ್ದೊತ ನಾಗಣ್ಣ
್. ವಿಶೇಷ ಏನಿಲ್ಲೆ. ಆಚೆ ಮನೆವ್ಕೆ ಕೊಟ್ಟ ಹಾಲ್‌ದ್ ದುಡ್ಡು
ನ್ ಸಿಕ್ಕಿತ್. ಮತ್ತೆ ಗಮ್ಮತ್ ಮಾಡದೆ ಸುಮಾರ್ ದಿನ
ತ್ತಲ್ಲ. ಹಂಗೆ ಮಕ್ಕಳ ಕೈಲಿ ಮಾಂಸ ತರ್ಸಿ ಗಮ್ಮತ್ ಮಾಡ್ಸೆತ
್ತ್. ಅಂದರೂ ಈ ವಿಷಯನ ಮಾತ್ರ ಭಾರೀ ಗುಟ್ಟುಲೇ ಇಸಿತ್.

ಮಾರ್ನೆ ದಿನ, ಯಾಗೋಳು ಎಂಟ್‌ಗಂಟೆಗೆ ಏಳುವ ನೀಲಕ್ಕ
ದ್ ಎಲ್ಲವ್ಕಿಂತ ಮುಂದೆ ಐದ್ ಗಂಟೆಗೆ ಎದ್ದ್ ಬೆಳಿಗ್ಗೆನ
ಗಿದ್ದದೆಲ್ಲ ಮಾಡಿ ಗಂಡಂಗೆ ಬುತ್ತಿ ಎಲ್ಲ ಬ್ಯಾಗ ಮಾಡಿ ಕೊಟ್ಟು
ಡನ ಕಳ್ಸಿತ್. ಮನೆನೆಲ್ಲ ಮಡಿ ಮಾಡಿ ಮೀಯ್ದ್ ಶುದ್ಧ ಆಗಿ
ವ ಯಾಗ ಬಂದದೆತ ಕಾದ್‌ಕಂಡ್ ಬಾಗ್‌ಲ್‌ಲೆ ನಿತ್ತಿತ್.
ಗೋಳು ದಾರಿಲಿ ಹೋಗವರ್ನೆಲ್ಲಾ ಕರ್ದ್ ಮಾತಾಡ್ಸುವ ನೀಲಕ್ಕ
ಅಂದ್ ಯಾರೊಟ್ಟಿಗೆ ಮಾತಾಡ್ತ್‌ಲೆ. ಮಾತಾಡ್ರೆ ಎಲ್ಲಾದ್ರ್ ಮನೆಗೆ
ಬಂದ್‌ಬುಡುವೊತ ಸುಮ್ಮನೆ ಇತ್ತ್. ಅಂತೂ ಹಿಂದೆನ ದಿನ
ಹೆಂಗ್‌ಸ್ ಹೇಳ್ದಂಗೆ, ಮಂತ್ರ ಮಾಡುವ ಗಂಡ್‌ಸ್ ಬೆಳಿಗ್ಗೆನ
ಹನ್ನೊಂದು ಗಂಟೆಗೆ ಮನೆ ಹತ್ರ ಬಾತ್. ಬಾಗ್ಲ್‌ಲಿ ನಿತ್ತ್‌ಕಂಡಿಂದ್ದ
ನೀಲುಕ್ಕನ ನೋಡಿಕ್ಕಂಡ್ ಇದ್ ನೀಲುಕ್ಕನ ಮನೆನಾಂತ ಕೇಳ್ತ್.
ಹೌದು ಬನ್ನಿ ಬನ್ನಿ ನಾನ್ ನಿಮಿಗಾಗಿ ಇಷ್ಟೊತ್ತುಂದ ನಿಮ್ಮನೇ
ಕಾಯ್ತಿದ್ದೇತೇಳಿ ಖುಷಿಲಿ ಒಳಗೆ ಕರ್ಕಂಡ್ ಹೋಗಿ ಕೂರ್ಸಿ ಕೂಡ್ಲೆ
ಬಂದ್ ಬಾಗ್ಲ್ ಹಾಂಕಂಡ್ ಹಾಲ್ ಕುಡಿಯಕೆ ಕೊಟ್ಟ್ ಸತ್ಕಾರ ಮಾಡ್ತ್.

ಇನ್ನ್ ಒಳ್ದದ್ ಮಂತ್ರದವನ ಕೆಲ್ಸ. ಅಂವ ನೀಲುಕ್ಕನೊಟ್ಟಿಗೆ
ಒಂದು ತಟ್ಟೆಲಿ ಸ್ವಲ್ಪ ಅಕ್ಕಿ, ಅರ್ಸಣ, ಕುಂಕುಮ. ಕಾಯಿ
[ತೆಂಗಿನಕಾಯಿ] ಮನೆಲಿರುವ ಚಿನ್ನ ಮತ್ತೆ ದುಡ್ಡುನ ಎಲ್ಲ ತಂದ್
ಇಟ್ಟ್ ಅವನ ಮುಂದೆ ಕುದ್ರಿಕೆ ಹೇಳ್ತೆ. ನೀಲುಕ್ಕ ಎಲ್ಲಾ ತಂದ್
ಕೊಟ್ಟ್ ಕುದ್ದ್‌ಕಂಡ್ ನೋಡ್ತಾ ಉಟ್ಟು ಮಂತ್ರದವ ಅಂವನ
ಹೆಗ್‌ಲ್‌ಲಿದ್ದ ಜೋಳಿಗೆಂದ ಎರ್ಡ್ ಡಬ್ಬ ತೆಗ್ದ್. ಇಟ್ಟ್ ತೆಂಗಿನಕಾಯಿ
ಒಡ್ದ್ ಆ ಡಬ್ಬಿಗೆ ಅರ್ಸಣ, ಕುಂಕುಮ ಹಾಕಿ, ಮಂತ್ರ ಹೇಳಿಕೆ ಸುರು
ಮಾಡ್ತ್. ಮತ್ತೆ ನೀಲುಕ್ಕಂಗೆ ಹೇಳ್ತ್, ಅಲ್ಲ ನೀಲುಕ್ಕ ನಿಮ್ಮತ್ರ
ಇನ್ನೂ ದುಡ್ಡು ಮತ್ತೆ ಚಿನ್ನ ಉಟ್ಟುತ ನನ್ನ ಮನ್ಸಿಗೆ ಹೇಳ್ತಾ ಉಟ್ಟು
ಅದರ ಎಲ್ಲಾ ತನ್ನಿ. ಈಗ ಇರ್ದ್ರ ಎರಡರಸ್ಟು ಆದೆತ ಹೇಳಿಕನ
ನೀಲುಕ್ಕ ಕೋಂಬರೆ (ರೂಮು)ಗೆ ಹೋಗಿ ಅಲ್ಲಿ ಇಲ್ಲಿ ಎಲ್ಲ ಹುಡ್ಕಿ.
ಇದ್ದ ದುಡ್ಡುನ, ಮತ್ತೆ ಮಗಕ್ಕಳ ಚಿನ್ನನ ಎಲ್ಲಾ ತಂದ್ ಕೊಟ್ಟತ್.
ಅಂವ ಎಲ್ಲದರ್ನ ಸೇರ್ಸಿ. ನೀಲುಕ್ಕ ಕಣ್ಣ್ ಮುಚ್ಚಿ, ಕೈಮುಗ್ದ್ ಕೂರಿಕೆ
ಹೇಳಿ ಮಂತ್ರ ಹಾಕಿಕೆ ಸುರು ಮಾಡ್ತ್. ಅಕ್ಕಿನ ಜೊತೆಲಿ ದುಡ್ಡುನ
ಮತ್ತೆ ಚಿನ್ನನ ಡಬ್ಬಿಗೆ ಹಾಕಿ ಊದ್‌ಬತ್ತಿ ಹೊತ್ತ್‌ಸಿ, ನೀಲುಕ್ಕನ
ಕೈಮದ್ದೆ ನಮಸ್ಕಾರ ಮಾಡಿಕಂಬಕೆ ಹೇಳ್ತ್. ಮತ್ತೆ ಹೋಗಿ ಆಲ್ಮೇರಾದ
ಬಾಗ್ಲ್ ತೆಗಿಯನಿ. ನಾನ್ ಇದರ್ನ ಅಲ್ಮೇರಾದ ಒಳಗೆ ಇಟ್ಟನೆತ
ಹೇಳ್ತ್. ನೀಲುಕ್ಕ ಅತ್ತ ಆಲ್ಮೇರಾದ ಬಾಗ್ಲ್ ತೆಗಿಯಕೆತ ಮುಂದೆ
ಹೋಕನ ಮಂತ್ರದಂವ ನೀಲುಗೆ ಕಾಣದಂಗೆ ಆ ಡಬ್ಬನ ಅಂವನ ಜೋಳಿಗೆ
ಒಳಗೆ ಹಾಕಿ, ಇನ್ನೊಂದು ಡಬ್ಬನ ತೆಗ್ದ್ ತಟ್ಟೆಲಿ ಇಟ್ಟ್ ಮಂತ್ರ
ಹೇಳಿಕಂಡ್ ಹಿಂದೆಂದ ಹೋಗಿ ಆಲ್ಮೇರಾ ಬಾಗ್ಲ್ ತೆಗ್ದಂಗೆ ಒಳಗೆ
ಇಟ್ಟ್ ಬಾಗ್ಲ್ ಹಾಕಿತ್. ಮೂರು ದಿನ ಕಳ್ದ್ ಇದರ ಬಾಗ್ಲ್ ತೆಗ್ದ್
ನೋಡ್ಲೊಕು. ಅದರ್‌ಂದ ಮುಂದೆ ನೋಡಿಕಾಗದ್‌ತ ನೀಲು ಅಕ್ಕಂಗೆ
ಹೇಳ್ತ್. ನೀಲುಕ್ಕ ಆತ್‌ತೆ ಒಪ್ಪಿಕಂಡತ್. ಮಾಡ್ದ ಕೆಲ್ಸಕ್ಕೆ ದಕ್ಷಿಣೆ ತಕಂಡು
ಮಂತ್ರದಂವ ಜೋಳಿಗೆ ಬೆಚ್ಚಗೆ ಮಾಡಿಕಂಡ್ ಹೊರ್ಟ್ ಹೋತ್.

ನೀಲು ಅಕ್ಕಂಗೆ ಇತ್ತ ಕಡೆ ಖುಷಿಯೇ ಖುಷಿ. ಸಾಯಂಕಾಲ
ಗಂಡ ಬಂದರೂ ವಿಷಯನ ಹೇಳ್ತೇಲೆ. ನೀಲುಕ್ಕಂಗೆ ಯಾಗ ಒಮ್ಮೆ
ಮೂರು ದಿನ ಕಳ್ದದೆತ ಒಂದೇ ಗ್ಯಾನ. ಯಾಗ ಆ ದುಡ್ಡುನ ಮತ್ತೆ
ಚಿನ್ನನ ಕಣ್ತುಂಬ ನೋಡ್ದುತ ಗ್ಯಾನಲಿ ಎರ್ಡ್ ದಿನ ಕಾತ್. ಎರ್ಡ್‌ನೇ
ದಿನ ಮಧ್ಯಾಹ್ನದವರೆಗೆ ಕಷ್ಟಪಟ್ಟ್ ಹೆಂಗೋ ಸುಧಾರ್ಸಿಕಂಡತ್.
ಮೂರ್ನೇ ದಿನದವರೆಗೆ ಕಾಯಕೆ ಮನ್ಸ್ ಕೇಳ್ತ್‌ಲೆ. ಎರ್ನ್ಡೆ ದಿನ
ಮಧ್ಯಾಹ್ನ ಮ್ಯಾಲೆ ಹೋಗಿ ಆಲ್ಮೇರಾ ಬಾಗ್ಲ್ ತೆಗ್ತ್. ಡಬ್ಬಿನ
ನೋಡ್ತ್. ನೋಡ್ರೆ ಡಬ್ಬಿ ಭಾರ ಮುಟ್ಟದೆ. ನೀಲುಕ್ಕನ ಖುಷಿಗೆ
ಮಿತಿಯೇ ಇಲ್ಲೆ. ಇದ್ದದ್ ಎರಡರಷ್ಟಾಗುಟು ಕಂಡದೆತ ಖುಷಿಲಿ

20ನೇ ಪುಟಕ್ಕೆ

# ನಾವು ಮರೆಯುವುದು ಏಕೆ?

ಮರೆವು ಸಾಮಾನ್ಯವಾಗಿ ಎಲ್ಲಾ ವಯಸ್ಕರನ್ನು ಕಾಡುವ ಒಂದು ರೋಗ ಎನ್ನಬಹುದು. ನಮ್ಮ ದೃಷ್ಟಿಯಲ್ಲಿ ರೋಗದ ಹಾಗೆ ಕಾಣಿಸಿಕೊಂಡರು, ಅದು ನಮ್ಮಲ್ಲಿ ಇರುವ ಅಲಕ್ಷ್ಯವನ್ನು ಸಹ ಕೆಲವು ವೇಳೆ ತೋರಿಸಿಕೊಡುತ್ತದೆ ಅಲ್ಲವೇ?

ನಮ್ಮಲ್ಲಿ ನಾವು ಮರೆಯುವುದು ಏಕೆ? ಎಂಬ ಪ್ರಶ್ನೆ ಯಾವಾಗಲೂ ಕಾಡುತ್ತದೆ ಅಲ್ಲವೇ? ಇದು ಏಕೆ ಎಂದರೆ ಪಂಚೇಂದ್ರಿಯಗಳ ಮೂಲಕ ಮಿದುಳನ್ನು ಸೇರಿದ ಮಾಹಿತಿ, ಮಿದುಳಿನ ನರಕೋಶಗಳಲ್ಲಿ ವಿದ್ಯುತ್ ಕಂಪನವನ್ನುಂಟು ಮಾಡಿ ದಾಖಲಾಗುತ್ತದೆ. ಮಾಹಿತಿ ಮುಖ್ಯವೇ, ಅಮುಖ್ಯವೇ ಎಂದು ಮಿದುಳಿನ ಲಲಾಟ ಭಾಗ ನಿರ್ಧರಿಸುತ್ತದೆ. ಮಾಹಿತಿ ಅಮುಕ್ಯ ಎಂದಾದರೆ ಅದು ಮುದ್ರಣವಾಗುವುದಿಲ್ಲ. ಆ ಮಾಹಿತಿಗೆ ಏನು ಪ್ರತಿಕ್ರಿಯೆ ತೋರಿಸಬೇಕೋ ಅದನ್ನು ಪ್ರಕಟಿಸಿ ಮಿದುಲು ಮಾಹಿತಿಯನ್ನು ಮರೆಯುತ್ತದೆ. ಮಾಹಿತಿ ಮುಖ್ಯ ಎಂದಾದರೆ, "ಅಸಿಟೈಲ್ ಕೋಲಿನ್" ಎಂಬ ರಾಸಾಯನಿಕವನ್ನು ಬಳಸಿಕೊಂಡು ಮಾಹಿತಿ ನರಕೋಶಗಳಲ್ಲಿ ಮುದ್ರಣವಾಗುತ್ತದೆ. ಆನಂತರ ಇದು ನೆನಪಿನ ಸಂಗ್ರಹಕ್ಕೆ ವರ್ಗವಾಗುತ್ತದೆ. [Long Term Memory] ವ್ಯಕ್ತಿಗೆ ಬೇಕಾದಾಗ ಮಾಹಿತಿ ಸ್ಮರಣೆಗೆ ಬರುತ್ತದೆ. ಅಂದರೆ ನೆನಪು ಮೂರು ಹಂತದ ಕ್ರಿಯೆ. ಗ್ರಹಣ, ಮುದ್ರಣ, ಸ್ಮರಣೆ. ಈ ಮೂರು ಹಂತದಲ್ಲಿ ಯಾವ ಹಂತದಲ್ಲಿಯಾದರೂ ಅಡಚಣೆಯಾದರೆ, ಮಹೀತಿಯನ್ನು ನಾವು ಸ್ಮರಿಸಿಕೊಳ್ಳಲು ಆಗುವುದಿಲ್ಲ. ಅದೇ ಮರೆವು. ಉದಾಹರಣೆಗೆ ಏಕಾಗ್ರತೆಯಿಂದ ಮಾಹಿತಿಯನ್ನು ಗ್ರಹಿಸದೇ ಹೋದರೆ, ಅಥವಾ ಆ ಕ್ರಿಯೆ ನಡೆಯುವಾಗ ನಮ್ಮ ಮನಸ್ಸನ್ನು ಇತರ ವಿಷಯಗಳು ಆಕರ್ಷಿಸಿದರೆ ಅಥವಾ ಮಾಹಿತಿಯನ್ನು ಗ್ರಹಿಸಿದ ಕೂಡಲೇ ಅದನ್ನು ಹಿಂದಕ್ಕೆ ತಳ್ಳುವಂತಹ ಪ್ರಭಾವಕಾರಿ ಇತರ ವಿಷಯಗಳು ಮನಸ್ಸನ್ನು ಆಕ್ರಮಿಸಿದರೆ ಮಾಹಿತಿ ನೆನಪಿನಲ್ಲಿ ಉಳಿಯದು. ವಿಷಯ ಮಾಹಿತಿಯನ್ನು ಮನನ ಮಾಡದಿದ್ದರೆ, ಅದು ಬೇಗ ಮರೆತುಹೋಗುತ್ತದೆ. ಮನಸ್ಸನ್ನು ಆತಂಕ ಭಯ, ಕೋಪ, ದುಃಖದಂತಹ ನಕಾರಾತ್ಮಕ ಭಾವನೆಗಳು ಆವರಿಸಿದ್ದರೆ, ಮುದ್ರಿತವಾದ ವಿಷಯ ಸರಿಸಮಯಕ್ಕೆ ಸ್ಮರಣೆಗೆ ಬರುವುದಿಲ್ಲ. ಹೆಚ್ಚಿನ ವಿದ್ಯಾರ್ಥಿಗಳು ಟೆಸ್ಟ್ ಪರೀಕ್ಷೆಯ ಫಲಿತಾಂಶದ ಬಗ್ಗೆ ವಿಪರೀತ ಆತಂಕ ಭಯ ಪಡುವುದೇ ಪರೀಕ್ಷಾ ಸಮಯದಲ್ಲಿ ಓದಿದ್ದೆಲ್ಲ ಮರೆತು ಹೋಗಲು ಸಾಮಾನ್ಯ ಕಾರಣ, ನೋವು, ಕಷ್ಟ, ನಷ್ಟ, ಸೋಲು, ಅಗಲಿಕೆ, ಸಾವು ಇಂತಹ ಅಹಿತ ಘಟನೆಗಳು ನಡೆದಾಗ, ಖಿನ್ನತೆ ಮನಸ್ಸನ್ನು ಮುತ್ತುತ್ತದೆ. ಆಗಲೂ ಸ್ಮರಣ ಶಕ್ತಿ ಕುಗ್ಗುತ್ತದೆ.

ಇಳಿ ವಯಸ್ಸಿನಲ್ಲಿ ಮಿದುಳಿನ ನರಕೋಶಗಳಿಗೆ ರಕ್ತಪೂರೈಕೆ ಕಡಿಮೆಯಾಗಿ ಅಥವಾ ನರಕೋಶಗಳು ನಶಿಸಿಹೋಗಿ ನೆನಪಿನ ಶಕ್ತಿ ಕುಂದುತ್ತಾ ಹೋಗುತ್ತದೆ. ಕಡೆಗೆ ವ್ಯಕ್ತಿಗೆ ತನ್ನ ಮಕ್ಕಳ ಹೆಸರೇ ಮರೆತುಹೋಗಲು, ಹತ್ತಾರು ವರ್ಷ ಓಡಾಡಿದ ಬೀದಿ, ಕೇರಿಗಳ ದಾರಿಯೇ ಮರೆತು ಹೋಗಲು ಮನೆಯೊಳಗೆ ಬಚ್ಚಲು ಮನೆ, ಅಡುಗೆಮನೆ ಮಲಗುವ ಕೊಠಡಿಯ ದಿಕ್ಕೇ ಮರೆತುಹೊ ಪ್ರಾರಂಭವಾಗುತ್ತದೆ. ಈ ಸ್ಥಿತಿಯನ್ನು ಡೆಮೆನ್ಷಿಯ ಎನು ಮಿದುಳಿಗೆ ತೀವ್ರ ಪೆಟ್ಟುಬಿದ್ದಾಗ ಪೆಟ್ಟು ಬಿದ್ದ ಕ್ಷಣದಿಂದ ಅಥವಾ ಆಮೇಲೆ ನಡೆದ ಘಟನೆಗಳು ಮರೆತು ಹೋಗುತ್ತವೆ. ರಿಟ್ರೋಗ್ರೇಡ್ ಮತ್ತು ಆಂಟಿರೋಗ್ರೇಡ್ ಅಮ್ನೇಸಿಯಾ ಕರೆಯುತ್ತಾರೆ.

ಸಂಗ್ರಹ : ಉಳುವಾರನ ಧನುಜ ಜನಾ
ಕುಶಾ

❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖

## ನಿಮಗಿದು ಗೊತ್ತೆ

1. ವಿಶ್ವದ ಅತಿದೊಡ್ಡ ದ್ವೀಪ : ಗ್ರೀನ್‌ಲ
2. ಕನ್ಯಾಕುಮಾರಿಯ ಇಂಗ್ಲೀಷ್ ಹೆಸರು : ಕೇಪ್ ಕ್ಯಾ
3. ವಿಶ್ವದಲ್ಲೇ ಅತಿ ಚಿಕ್ಕ ರಾಷ್ಟ್ರ : ವ್ಯಾಟಿಕ
4. ಭಾರತದಲ್ಲಿ ಮೊದಲು ತಯಾರಾದ ಚಲನಚಿತ್ರ : ರಾಜ ಹರಿ
5. ರವೀಂದ್ರನಾಥ ಠಾಗೂರರು ನಟಿಸಿರುವ ಚಿತ್ರ : ವಾಲ್ಮೀಕಿ ಪ್ರ
6. ಮಾನವನ ನಂತರ ಬುದ್ಧಿವಂತಿಕೆಗೆ ಹೆಸರಾದ ಪ್ರಾಣಿ: ಡಾ
7. ಅತೀ ದೊಡ್ಡ ನೀರಿನ ಹಾವು : ಅನ
8. ವಿಶ್ವದ ಅತೀ ಆಳವಾದ ಸ್ಥಳ : ಛಾಲೆಂಜರ್
9. ಇಂಗ್ಲೀಷ್ ಕಾಲುವೆಯಯ ಉದ್ದ : 564 ಕಿ.
10. ಮಾರ್ನಿಂಗ್ ಸ್ಟಾರ್ ಎಂಬ ಗ್ರಹ :

**ಪರಿಚನ ಟಿ. ಪ್ರದೀಪ ಮರಗೊ**

❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖

**19ನೇ ಪುಟದಿಂದ**

ಬಿಚ್ಚಿ ನೋಡ್ದೆ. ಅಷ್ಟರವರೆಗೆ ಹೂವುನಂಗೆ ಅರ್ಳಿಕಂಡಿದ್ದ ಸುಟ್ಟ ಬಾಳೆಕಾಯಿನಂಗೆ ಆತ್. ಆ ಡಬ್ಬಿಲಿ ಎಂತ ಇರ್‍ದುತ ನಿಮ ಕುತೂಹಲ ಇರ್‍ದ್ ಅಲ. ಅದರ್‍ಲಿ ಚಿನ್ನ, ದುಡ್ಡನ ಎರಡರಷ್ಟರ ಮೂರ ಪಟ್ಟ್ ತೂಕದ ಮೂರು ಕಲ್ಲ್‌ಗ ಇತ್. ಅದರ ನೋಡ್ದು ನೀಲುಕ್ಕ ತಲೆ ತಿರ್‍ಗಿ ಬಿದ್ದೋತ್. ನಾಗಣ್ಣ ಸಾಯಂ ಮನೆಗೆ ಬಾಕನ ಹೆಣ್ಣ್‌ನ ಬಾಡಿಕಂಡಿದ್ದ ಮುಖ ನೋಡಿ ಎಂತಾ ಕೇಳ್ತ್. ಇನ್ನ್ ಇದರ ಮುಚ್ಚಿಟ್ಟರೆ ಆದುಲೆ ತೇಳಿ ನೀಲುಕ್ಕ ವಿಷಯನ ಹೇಳ್ತ್. ನಾಗಣ್ಣ ಬೊಯ್ಯಕೆ ಹೋತ್ಲೆ. ಬದ್ಲಿಗೆ ನೀವೇ ಯಾವಾರ ಮಾಡ್ರೆ ಹಿಂಗೆ ಆದುತ ಹೇಳ್ತ್. ಅಂತೂ ಮತ್ತೆ ದುಡ್ಡುನ ಕತ ಮುಗ್ದೋತ್. "ಅತಿಯಾಸೆ ಗತಿಗೇಡಾತ್ ತಿಳುವಳಿಕೆ ಇಲ್ಲದೆ ಮಾಡ್ರೆ ಹಿಂಗೇ ಆದು. ಮೂಢನಂಬ ಸ್ವಲ್ಪ ದೂರ ಮಾಡೊಕು. ಇಂತ ಕಪಟ ಜನಗ ನಿಮ್ಮಲ್ಲಿಗೂ ಬರು ಜಾಗ್ರತೆಲಿರಿ.

ಕುಮಾರಿ ಹೊಸೂರು ಜಯಭಾರತಿ ಅಪ
ಚೇರಂಗಾಲ ಗ್ರಾಮ, ಭಾಗಮಂ

❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖

## ಅರೆಭಾಷಿಕ ಮಾಜಿ ಸೈನಿಕರ ಸಹಕಾರ ಸಂಘ, ಮೈಸೂರು

ಭಾರತೀಯ ರಕ್ಷಣ ಪಡೆ ಮತ್ತು ಪ್ಯಾರ ಮಿಲಿಟರಿ ಪಡೆಯಲ್ಲಿ (ಭೂ ದಳ, ನೌಕಾ ದಳ, ವಾಯು ದಳ, ಬಿ. ಎಸ್.ಎಫ್., ಆರ್.ಪಿ., ಪ್ಯಾರ ಮಿಲಿಟರಿ, ಕರ್ನಾಟಕ ರಾಜ್ಯ ಪೋಲಿಸ್ ಪಡೆ ಅಥವಾ ಇನ್ನ್ಯಾವುದೆ ರಕ್ಷಣಾ ಪಡೆಯಲ್ಲಿ) ಸೇವೆ ಸಲ್ಲಿಸಿ, ನೃತ್ತರಾಗಿ ಈಗ ಹಾಲಿ ಮೈಸೂರಿನಲ್ಲಿ ವಾಸವಿರುವ ಮಾಜಿ ಸೈನಿಕರನ್ನು ಅವರ ಅಭಿವೃದ್ಧಿಗಾಗಿ ಸಂಘಟಿಸುವ ಸಮಯ ಬಂದಿದೆ. ವೆಲ್ಲರೂ ಒಂದುಸ್ಥಳದಲ್ಲಿ ಕೂತು ನಮ್ಮ ಸಮಸ್ಯೆಯನ್ನು ಚರ್ಚಿಸುವ ವೇದಿಕೆ ಇದಾಗಿದೆ. ಆದ್ದರಿಂದ ಆಸಕ್ತರು ದಿನಾಂಕ 18-9-1999ರ ಜೆ 18-00 ಗಂಟೆಗೆ ಜಯಲಕ್ಷ್ಮೀಪುರಂನಲ್ಲಿರುವ ಗೌಡ ವಿದ್ಯಾರ್ಥಿ ನಿಲಯದಲ್ಲಿ ಸೇರಿ ಸೂಕ್ತ ಸಲಹೆ ಸಹಕಾರ ನೀಡಿ ಸಹಕರಿಸುವಂತೆ ಮ್ಮಲ್ಲಿ ನನ್ನ ಕಳಕಳಿಯ ಪ್ರಾರ್ಥನೆಯಾಗಿದೆ.

ಸಂಘಟಿತರು
**ಕೆ. ಪಿ. ಲಕ್ಷ್ಮಣ**
ಮನೆ ನಂ. 1047/28A, ೨ನೇ ಮೇನ್,
ಏಳನೇ ಕ್ರಾಸ್, ವಿದ್ಯಾರಣ್ಯಪುರಂ, ಮೈಸೂರು
ದೂರವಾಣಿ : 489052

---



**ಕೆ. ಎಂ. ಚಂದ್ರಮ್ಮ**
ಜನನ : 13-4-1943 ಮರಣ : 25-9-1997

## ೨ನೇ ವರ್ಷದ ಪುಣ್ಯತಿಥಿಯ ಸ್ಮರಣೆ

ನೀವು ನಮ್ಮನ್ನು ಅಗಲಿ ಇಂದಿಗೆ ಎರಡು ವರ್ಷ ಸಂದರೂ ನಿಮ್ಮ ಸವಿನೆನಪುಗಳೊಂದಿಗೆ ತಮ್ಮ ಆತ್ಮವು ಸದಾ ಚಿರಶಾಂತಿಯಿಂದ ಕೂಡಿರಲಿ ಎಂದು ಹಾರೈಸುತ್ತಿರುವ

**ಪತಿ : ಎಂ. ರಾಮೇಗೌಡ,**
**ಮಕ್ಕಳು, ಅಳಿಯಂದಿರು ಮತ್ತು ಮೊಮ್ಮಕ್ಕಳು**
ವಿಳಾಸ : 1019/ಎ, 9ನೇ ಮುಖ್ಯ ರಸ್ತೆ, 3ನೇ ಹಂತ,
ಗೋಕುಲಂ, ಮೈಸೂರು 570 002. ಟೆಲಿಫೋನ್ : 512049

---



**ಪಟ್ಟಡ ಮುತ್ತಣ್ಣ, ರವಿಕುಮಾರ್** ಬಿ.ಎ.
ಜನನ : 8-2-1960 ಮರಣ : 29-9-1991

## ೮ನೇ ವರ್ಷದ ಚಿರಸ್ಮರಣೆ

ನೀನು ನಮ್ಮನ್ನು ಅಗಲಿ ಇಂದಿಗೆ 8 ವರ್ಷಗಳೇ ಸಂದರೂ ಸದಾ ನಮ್ಮ ಮನಸ್ಸಿನಲ್ಲಿ ಹಚ್ಚ ಹಸಿರಾಗಿರುವ ನಿನ್ನ ಆತ್ಮಕ್ಕೆ ಪರಮಾತ್ಮನು ಚಿರಕಾಲ ಶಾಂತಿಯನ್ನು ನೀಡಲೆಂದು ಆಶಿಸುವ

**ಪತಿ : ಸಹೋದರರು : ಉಲ್ಲಾಸ, ಪ್ರಭಾಕರ, ತಿಮ್ಮಯ್ಯ**
**ಮತ್ತು ಅವರ ಪತ್ನಿಯಂದಿರು ಹಾಗೂ ಅವರ ಮಕ್ಕಳು**

---



**ಕರ್ಣೇಯ್ಯನ ಎಸ್. ಚಿಣ್ಣಪ್ಪ**
ಜನನ : 23-6-1910 ಮರಣ : 23-9-1983

## ೧೬ನೇ ವರ್ಷದ ಚಿರಸ್ಮರಣೆ

ನೀವು ನಮ್ಮನ್ನು ಅಗಲಿ ಇಂದಿಗೆ 16 ವರ್ಷಗಳೇ ಸಂದವು. ನೀವು ಹಾಕಿಕೊಟ್ಟ ದಾರಿ ನಮಗೆಲ್ಲ ಮಾದರಿಯಾಗಿದೆ. ನಿಮ್ಮ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ನೀಡಲಿ ಎಂದು ಪ್ರಾರ್ಥಿಸುವ,

**ಪತ್ನಿ : ರುಕ್ಮಿಣಿ,**
**ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು,**
**ಅಳಿಯಂದಿರು, ಸೊಸೆಯಂದಿರು**
**ನಂಜರಾಯಪಟ್ಟಣ**



## ಜೀವಾವಧಿ ಸದಸ್ಯತನ ಕೊಟ್ಟೊಳೊ

ಶ್ರೀಮತಿ ಮತ್ತು ಶ್ರೀ ಕೆಟೋಳಿರ ಚಿಣ್ಣಪ್ಪ ಮತ್ತೆ ದಂಪತಿಗ ಪತ್ರಿಕೆಯ ಅಭಿವೃದ್ಧಿ ಬಯಸಿ ಜೀವಾವಧಿ ಸದಸ್ಯತನ ಕೊಟ್ಟೊಳೋ. ಇವುಕೆ ಕುಲದೇವ್ರು ವೆಂಕಟರಮಣನ ಕೃಪಾಕಟಾಕ್ಷ ಇರಲಿತ್ತ್ೇಳಿ ಸಂಗಾತಿ ಹಾರೈಸಿದೆ.

**– ಸಂಪಾದಕಿ**

ಕಿರು ಪರಿಚಯ : ಶ್ರೀಯುತರು ಭಾರತೀಯ ಸೇನೆಯಲ್ಲಿದ್ದು 1971ರಲ್ಲಿ ನಿವೃತ್ತಿಯಾಗಿ ನಂತರ ತನ್ನ ಊರಿನ ಜಮೀನಿನ ಕೃಷಿಯಲ್ಲಿ ತೊಡಗಿ ಮಕ್ಕಳಿಗೆ ಉನ್ನತ ಶಿಕ್ಷಣ ನೀಡಿ ಮೆರೆದ ಆದರ್ಶ ವ್ಯಕ್ತಿಯಾಗಿದ್ದಾರೆ

---



## ಅಭಿನಂದನೆಗಳು

1999-2000ನೇ ಸಾಲಿನ ಕೊಡಗು ಜಿಲ್ಲಾ ಅತ್ಯುತ್ತಮ ಶಿಕ್ಷಕ ಪ್ರಶಸ್ತಿ ವಿಜೇತರಾ ಬೆಟ್ಟಗೇರಿ ಉದಯ ಪ್ರೌಢಶಾಲಾ ಮುಖ್ಯೋಪಾಧ್ಯಾಯರಾದ **ಕೆದಂಬಾಡಿ ಎಸ್. ಪುಟ್ಟಯ್ಯನವರಿ** ಹೃತ್ಪೂರ್ವಕ ಅಭಿನಂದನೆಗಳು.

**ಶ್ರೀ ಪಟ್ಟಡ ಪ್ರಭಾಕ**
**ಮತ್ತು ಶೀಲಾಮ**

---

## ವಿಶೇಷ ಪ್ರಕಟಣೆ

ದಿನಾಂಕ 2-9-1999ರಲ್ಲಿ ನಡೆದ ಪೆಪ್ಸಿ ಡ್ಯಾನ್ಸ್ ಡ್ಯಾನ್ಸ್ ಕಾರ್ಯಕ್ರಮಲಿ ಕಾವೇರಿ ನಾಡ್ ಜನಪದ ಸಾಂಸ್ಕೃತಿಕ ಒಕ್ಕೂಟಕ್ಕೆ ಫಸ್ಟ್ ಪ್ರೈಜ್ ಸಿಕ್ಕಿಟು. ಪ್ರತಿ ಮಂಗಳವಾರ ಬರುವ ಪೆಪ್ಸಿ ಡ್ಯಾನ್ಸ್ ಡ್ಯಾನ್ಸ್ ಕಾರ್ಯಕ್ರಮಲಿ ಅಮ್ಮಾಜೀರ ಪೊನ್ನಪ್ಪ ರಚಿತ ಡೆನ್ನಾನೋ ಡೆನ್ನಾನೋ ಹಾಡ್‌ಗೆ ಗೌಡ ಸಾಂಸ್ಕೃತಿಕ ಉಡಿಗೆಲಿ ಪ್ರಥಮ ಬಾರಿಗೆ ಉದಯ ದೂರದರ್ಶನಲಿ ಪ್ರಚಾರಗೊಂಡಿದೆ. ಅರೆಭಾಷಿಕ ಸಾರಸ್ವತ ಲೋಕಕ್ಕೆ ತುಂಬಾ ಹೆಮ್ಮೆ ತರುವ ವಿಚಾರ ಇದಾಗುಟು ಅಮ್ಮಾಜೀರ ಪೋನ್ನಪ್ಪ ತಂಡಕ್ಕೆ ಕುಲದೇವರು ವೆಂಕಟರಮಣನ ಕೃಪಾಕಟಾಕ್ಷೆ ಸದಾ ಇರಲಿತ್ತ್ೇಳಿ ಹಾರೈಸೋನೊ ಅಲಾ

**ಪಟ್ಟಡ ಪ್ರಭಾಕರ**

---

## ವಿನಂತಿ

ಚಂದದಾರರು ೨ ವರ್ಷ, ೧ ವರ್ಷ, ಆರು ತಿಂಗಳ ಅವಧಿಯ ಹಿಂದಿನಿಂದ ನವೀಕರಿಸದೆ ಇರುವ ಚಂದದಾರರು ಕೂಡಲೇ ನವೀಕರಿಸುವಂತೆ ಕೋರಿಕೆ. ಇಲ್ಲವಾದಲ್ಲಿ ಮುಂದಿನ ಅಕ್ಟೋಬರ್ ೧ ರಿಂದ ಅವರಿಗೆಲ್ಲಾ ಪತ್ರಿಕೆಯನ್ನು ನಿಲ್ಲಿಸಲಾಗುವುದು. ತಾಳುವುದಕ್ಕೂ ಒಂದು ಮಿತಿಯಿದೆ. ನಷ್ಟದ ಮೇಲೆ ನಷ್ಟ ಭರಿಸಲು ಸಾಧ್ಯವಿಲ್ಲ. ಉದಾಸೀನ ಸಲ್ಲ.

**ಸಂಪಾದಕಿ**

---

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.